WPP-47 / 2009-2011

# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೭ | ಬೆಂಗಳೂರು, ಗುರುವಾರ, ಮಾರ್ಚ್ ೨೨, ೨೦೧೨ (ಚೈತ್ರ ೨, ಶಕ ವರ್ಷ ೧೯೩೪) | ಸಂಚಿಕೆ ೧೨ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಇಂಧನ ಸಚಿವಾಲಯ**

**ವಿಷಯ :** ಮೆ॥ ವಿ. ಪ್ರಾಮ್ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರ 0.5 ಮೆಗಾ ವ್ಯಾಟ್ ದೇವರಾಯ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕೆ ಕಾಲಾವಕಾಶ ವಿಸ್ತರಿಸುವ ಬಗ್ಗೆ.–

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಡಿಇ 28 ಎನ್‌ಸಿಇ 1996 (25) ದಿನಾಂಕ 24–7–1996
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 383 ಎನ್‌ಸಿಇ 2005, ದಿನಾಂಕ 16–12–2005
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 300 ಎನ್‌ಸಿಇ 2007, ದಿನಾಂಕ 27–10–2007
4) ಸರ್ಕಾರಿ ಆದೇಶ ಸಂಖ್ಯೆ: ಇಎನ್ 162 ಎನ್‌ಸಿಇ 2010, ದಿನಾಂಕ 26–2–2011
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/ಎಸ್‌ಹೆಚ್–31/2011–12/129, ದಿನಾಂಕ 13–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಮೆ॥ ವಿ. ಪ್ರಾಮ್ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ದೇವರಾಯ ಅಣೆಕಟ್ಟಿನಲ್ಲಿ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರ ಆದೇಶದಲ್ಲಿ, ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ1–1–2006 ರಿಂದ ಎರಡು ವರ್ಷದವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರ ಆದೇಶದಲ್ಲಿ, ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ 1–1–2008 ರಿಂದ ಎರಡು ವರ್ಷದವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (4)ರ ಆದೇಶದಲ್ಲಿ, ಯೋಜನೆಯಲ್ಲಿ ಅನುಷ್ಠಾನ ಮಾಡಲು ಕಾಲಾವಕಾಶವನ್ನು ದಿನಾಂಕ 31–12–2011ರ ವರೆಗೆ ವಿಸ್ತರಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಮೆ: ವಿ. ಪ್ರಾಮ್ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ರವರ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯು ಅನುಷ್ಠಾನದ ಹಂತದಲ್ಲಿದ್ದು, ಯೋಜನಾ ಅನುಷ್ಠಾನದ ನಿಟ್ಟಿನಲ್ಲಿ ಉತ್ತಮ ಪ್ರಗತಿಯನ್ನು ಸಾಧಿಸಿರುತ್ತಾರೆಂದು ವರದಿ ಮಾಡುತ್ತಾ, ಸದರಿ ಯೋಜನಾ ಅನುಷ್ಠಾನಕ್ಕೆ ಕಾಲಾವಕಾಶವನ್ನು ದಿನಾಂಕ 01–01–2012 ರಿಂದ 31–12–2013 ರವರೆಗೆ ಒಟ್ಟು ಎರಡು ವರ್ಷಗಳ ಕಾಲಾವಧಿ ಶುಲ್ಕವನ್ನು ಮತ್ತು Performance guarantee ಯನ್ನು ಪ್ರತಿ ಮೆಗಾ ವ್ಯಾಟ್‌ಗೆ ರೂ. 5.00 ಲಕ್ಷದಂತೆ ಪಾವತಿಸುವ ಷರತ್ತಿನೊಂದಿಗೆ ಕಾಲಾವಕಾಶವನ್ನು ವಿಸ್ತರಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 29 ಎನ್‌ಸಿಇ 2012, ಬೆಂಗಳೂರು, ದಿನಾಂಕ 28–01–2012**

ಮೆ॥ ವಿ. ಪ್ರಾಮ್ ಪವರ್ ಕಂಪನಿ ಪ್ರೈವೇಟ್ ಲಿಮಿಟೆಡ್ ಇವರಿಗೆ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿನ ದೇವರಾಯ ಅಣೆಕಟ್ಟಿನಲ್ಲಿ ಹಂಚಿಕೆಯಾಗಿರುವ 0.5 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ಅಂತಿಮವಾಗಿ

ದಿನಾಂಕ 01–01–2012 ರಿಂದ ದಿನಾಂಕ 31–12–2013 ರವರೆಗೆ ಕಾಲಾವಧಿ ಶುಲ್ಕವನ್ನು ಮತ್ತು Performance guarantee ಯನ್ನು ಪ್ರತಿ ಮೆಗಾ ವ್ಯಾಟ್‌ಗೆ ರೂ. 5.00 ಲಕ್ಷ (ರೂಪಾಯಿ ಐದು ಲಕ್ಷ ಮಾತ್ರ) ಪಾವತಿಸುವ ಷರತ್ತಿನೊಂದಿಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 505 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಎಸ್. ಎಂ. ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರು ಗಗನಚುಕ್ಕಿ ಜಲಪಾತದ ಬಳಿ ಸ್ಥಾಪಿಸುತ್ತಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯ ಕಾಲಾವಕಾಶ ವಿಸ್ತರಣೆ ಮಾಡುವ ಬಗ್ಗೆ.–

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ: ಇಎನ್ 511 ಎನ್‌ಸಿಇ 2006, ದಿನಾಂಕ 17–3–2007
2) ಸರ್ಕಾರಿ ಆದೇಶ ಸಂಖ್ಯೆ: ಇಎನ್ 257 ಎನ್‌ಸಿಇ 2007, ದಿನಾಂಕ 12–07–2007
3) ಸರ್ಕಾರಿ ಆದೇಶ ಸಂಖ್ಯೆ: ಇಎನ್ 379 ಎನ್‌ಸಿಇ 2007, ದಿನಾಂಕ 15–10–2007
4) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-277/Z Ranganatha Swamy MHS/2011/609, ದಿನಾಂಕ 08/17–02–2011.
5) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್‌ಇಡಿ/06/SH-277/ Ranganatha Swamy MHS/2011/2939, ದಿನಾಂಕ 20/23–09–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಮೆ॥ ಎಸ್. ಎಂ. ಪವರ್ ಪ್ರಾಜೆಕ್ಟ್ಸ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಶಿವನಸಮುದ್ರ ಗ್ರಾಮದ ಬಳಿ ಗಗನಚುಕ್ಕಿ ಜಲಪಾತದ ಕೆಳತೊರೆಯಲ್ಲಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ 2 ರ ಆದೇಶದಲ್ಲಿ ಸಾಮರ್ಥ್ಯವನ್ನು 4.00 ಮೆಗಾ ವ್ಯಾಟ್ ನಿಂದ 10.00 ಮೆಗಾ ವ್ಯಾಟ್‌ಗೆ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಆದೇಶದಲ್ಲಿ, ಮೆ॥ ಎಸ್. ಎಂ. ಪವರ್ ಪ್ರಾಜೆಕ್ಟ್ ಪ್ರೈವೇಟ್ ಲಿಮಿಟೆಡ್ ಕಂಪನಿಯ ಹೆಸರನ್ನು ಮೆ॥ ಎಸ್. ಎಂ. ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಎಂದು ಬದಲಾವಣೆ ಮಾಡಿ ಆದೇಶಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (4)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು, ಮೆ॥ ಎಸ್. ಎಂ. ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಇವರ 10.00 ಮೆಗಾ ವ್ಯಾಟ್ ಸಾಮಥ್ಯದ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಶಿವನಸಮುದ್ರ ಗ್ರಾಮದ ಬಳಿ ಗಗನಚುಕ್ಕಿ ಜಲಪಾತದ ಕೆಳತೊರೆಯಲ್ಲಿ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನದ ಅವಧಿಯು ದಿನಾಂಕ 14–12–2010ಕ್ಕೆ ಕೊನೆಗೊಂಡಿದ್ದು, ಈ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಕಾಶವನ್ನು ಒಂದು ವರ್ಷಕ್ಕೆ ಮುಂದುವರೆಸುವಂತೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (5)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಸದರಿ ಯೋಜನೆಯ ಇತ್ತೀಚಿನ ಪ್ರಗತಿ ವರದಿಯನ್ನು ನೀಡಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 477 ಎನ್‌ಸಿಇ 2010, ಬೆಂಗಳೂರು, ದಿನಾಂಕ 08–11–2011**

ಮೆ॥ ಎಸ್. ಎಂ. ಹೈಡ್ರೋ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಗೆ ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನ ಶಿವನಸಮುದ್ರ ಗ್ರಾಮದ ಬಳಿ ಗಗನಚುಕ್ಕಿ ಜಲಪಾತದ ಕೆಳತೊರೆಯಲ್ಲಿ ಹಂಚಿಕೆಯಾಗಿರುವ 10.00 ಮೆಗಾ ವ್ಯಾಟ್ ಸಾಮರ್ಥ್ಯದ ರಂಗನಾಥಸ್ವಾಮಿ–2 ಕಿರು ಜಲ ವಿದ್ಯುತ್ ಯೋಜನೆಯ ಅನುಷ್ಠಾನಕ್ಕಾಗಿ ಕಾಲಾವಕಾಶವನ್ನು ದಿನಾಂಕ 31–12–2012ರವರೆಗೆ ವಿಸ್ತರಿಸಲಾಗಿದೆ.

ಈ ಯೋಜನೆಗೆ ಸಂಬಂಧಿಸಿದಂತೆ ಈಗಾಗಲೇ ಮಾಡಿಕೊಂಡಿರುವ ಒಡಂಬಡಿಕೆಯಂತೆ ಕರ್ನಾಟಕ ವಿದ್ಯುತ್ ನಿಗಮ ನಿಯಮಿತದವರು ಶಿವನಸಮುದ್ರ ಗ್ರಾಮದ ಬಳಿ ಗಗನಚುಕ್ಕಿ ಜಲಪಾತದ ಕೆಳತೊರೆಯಲ್ಲಿ ಅನುಷ್ಠಾನಗೊಳಿಸಲು ಪ್ರಸ್ತಾಪಿಸಿರುವ ಯೋಜನೆಯಿಂದ ನೀರಿನ ಕೊರತೆ ಉಂಟಾದಲ್ಲಿ ಅಭಿವೃದ್ಧಿದಾರರು ಯಾವುದೇ ಪರಿಹಾರಕ್ಕೆ ಅರ್ಹರಿರುವುದಿಲ್ಲ ಎಂಬುದನ್ನು ಮತ್ತೊಮ್ಮೆ ಸ್ಪಷ್ಟಪಡಿಸಿದೆ.

ಈ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ

ಮೇಲೆ ಓದಲಾದ (1)ರ ಹಂಚಿಕೆ ಆದೇಶದ ಇತರ ನಿಬಂಧನೆಗಳು ಯಥಾವತ್ತಾಗಿ ಮುಂದುವರೆಯುತ್ತವೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 506 ಇಂಧನ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಎಸ್.ಕೆ.ಎಸ್. ಮೈಕ್ರೋ ಫೈನಾನ್ಸ್ ಪ್ರೈವೇಟ್ ಲಿ., ಹೈದ್ರಾಬಾದ್ ಸಂಸ್ಥೆಗೆ, ಲೇವಾದೇವಿ ಕಾಯ್ದೆಯಿಂದ ವಿನಾಯಿತಿ ನೀಡಿರುವ ಆದೇಶವನ್ನು ಹಿಂಪಡೆಯುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ : ಸಿಒ 11 ಸಿಎಂಎಲ್ 2007, ದಿನಾಂಕ : 25-5-2007.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಎನ್ ಎಂಎಲ್ / ವೈಎಂಸಿ / 03 / 2010-11, ದಿನಾಂಕ : 03-08-2010.
3. ಸರ್ಕಾರದ ಪತ್ರ ಸಂಖ್ಯೆ : ಸಿಒ 10 ಸಿಎಂಎಲ್ 2010, ದಿನಾಂಕ : 24-08-2010.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಸರ್ಕಾರಿ ಆದೇಶದಲ್ಲಿ ಎಸ್.ಕೆ.ಎಸ್. ಮೈಕ್ರೋ ಫೈನಾನ್ಸ್ ಪ್ರೈವೇಟ್ ಲಿ., ಹೈದ್ರಾಬಾದ್ ಸಂಸ್ಥೆ ಇವರಿಗೆ ವಿನಾಯಿತಿ ನೀಡಿ ಆದೇಶ ಹೊರಡಿಸಲಾಗಿತ್ತು. ಓದಲಾದ (2) ರಲ್ಲಿ ಈ ಸಂಸ್ಥೆಯು ಬೈಲಹೊಂಗಲ ತಾಲ್ಲೂಕಿನ ಸಂಗೊಳ್ಳಿ ಗ್ರಾಮದ ಬೆಳಗಾವಿ ಜಿಲ್ಲೆಯ ಶ್ರೀ ಉಮೇಶ್ ಮಾಟೋಳಿಯರವರಿಗೆ ಸಾಲ ನೀಡಿದ್ದು, ಸಾಲದ ಕಂತನ್ನು ವಸೂಲಾತಿ ಮಾಡಲು ಕಿರುಕುಳ ಮತ್ತು ಮಾನಸಿಕ ಹಿಂಸೆಯನ್ನು ನೀಡಿದ ಕಾರಣ ಶ್ರೀ ಉಮೇಶ್ ಮಾಟೋಳಿಯವರು ಮನನೊಂದು ವಿಷ ಕುಡಿದು ಆತ್ಮಹತ್ಯೆ ಮಾಡಿಕೊಳ್ಳಲು ಕಾರಣರಾಗಿರುತ್ತಾರೆಂದು ಮತ್ತು ಸಾಲಗಾರರಿಂದ ಹೆಚ್ಚು ಬಡ್ಡಿ ವಸೂಲಾತಿ ಮಾಡುತ್ತಿರುವುದರಿಂದ ವಿನಾಯಿತಿ ನೀಡಿರುವ ಆದೇಶವನ್ನು ರದ್ದು ಪಡೆಯುವ ಸಲುವಾಗಿ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ. ಓದಲಾದ (3) ರಲ್ಲಿ ಪ್ರಸ್ತಾವನೆ ಎಸ್.ಕೆ.ಎಸ್. ಮೈಕ್ರೋ ಫೈನಾನ್ಸ್ ಪ್ರೈವೇಟ್ ಲಿ., ಹೈದ್ರಾಬಾದ್ ಸಂಸ್ಥೆಗೆ, ಲೇವಾದೇವಿ ಕಾಯ್ದೆಯಿಂದ ವಿನಾಯಿತಿ ನೀಡಿರುವ ಆದೇಶವನ್ನು ಹಿಂಪಡೆಯುವ ಬಗ್ಗೆ, ವ್ಯವಸ್ಥಾಪಕ ನಿರ್ದೇಶಕರು, ಎಸ್.ಕೆ.ಎಸ್. ಮೈಕ್ರೋ ಫೈನಾನ್ಸ್ ಪ್ರೈವೇಟ್ ಲಿ., ಹೈದ್ರಾಬಾದ್ ಸಂಸ್ಥೆ ಇವರಿಗೆ ದಿನಾಂಕ : 26-08-2010 ಮತ್ತು 30-09-2010 ರಂದು ಕಾರಣ ಕೇಳುವ ನೋಟೀಸ್ ಕಳುಹಿಸಿ ಕೊಡಲಾಗಿತ್ತು.

ಸದರಿ ನೋಟೀಸು ಕ್ರಮವಾಗಿ ದಿನಾಂಕ : 15-09-2010 ಮತ್ತು ದಿನಾಂಕ : 04-10-2010 ರಂದು ಸ್ವೀಕೃತವಾಗದೆ ವಾಪಸ್ಸು ಬಂದಿರುತ್ತದೆ. ಆದ್ದರಿಂದ ಸರ್ಕಾರವು ಗಂಭೀರವಾಗಿ ಪರಿಗಣಿಸಿ ಎಸ್.ಕೆ.ಎಸ್. ಮೈಕ್ರೋ ಫೈನಾನ್ಸ್ ಪ್ರೈವೇಟ್ ಲಿ., ಹೈದ್ರಾಬಾದ್ ಸಂಸ್ಥೆಗೆ, ಲೇವಾದೇವಿ ಕಾಯ್ದೆಯಿಂದ ವಿನಾಯಿತಿ ನೀಡಿರುವ ಆದೇಶವನ್ನು ರದ್ದುಪಡಿಸುವ ಸಲುವಾಗಿ ತೀರ್ಮಾನಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಒ 10 ಸಿಎಂಎಲ್ 2010, ದಿನಾಂಕ : 05ನೇ ಜನವರಿ 2012**

ಎಸ್.ಕೆ.ಎಸ್. ಮೈಕ್ರೋ ಫೈನಾನ್ಸ್ ಪ್ರೈವೇಟ್ ಲಿ., ಹೈದ್ರಾಬಾದ್ ಸಂಸ್ಥೆಗೆ ಲೇವಾದೇವಿ ಕಾಯ್ದೆಯಿಂದ ವಿನಾಯಿತಿ ನೀಡಿರುವ ಸರ್ಕಾರಿ ಆದೇಶದ ಸಂಖ್ಯೆ : ಸಿಒ 11 ಸಿಎಂಎಲ್ 2007 ದಿನಾಂಕ : 25-05-2007 ರಲ್ಲಿ ನೀಡಿರುವ ಆದೇಶವನ್ನು ಭದ್ರತಾ ಠೇವಣಿ ಎಂದು ಸದರಿ ಸಂಸ್ಥೆಯು ಸರ್ಕಾರಕ್ಕೆ ಪಾವತಿಸಿರುವ ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳುವುದರೊಂದಿಗೆ ಕರ್ನಾಟಕ ಜನರಲ್ ಕ್ಲಾಸಸ್ ಅಧಿನಿಯಮ 1899 ರ ಪ್ರಕರಣ 21 ರಡಿಯಲ್ಲಿ ದತ್ತವಾದ ಅಧಿಕಾರವನ್ನು ಚಲಾಯಿಸಿ ರದ್ದುಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಆರ್. ಎಸ್. ನೂಲಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ,
ಸಹಕಾರ ಇಲಾಖೆ.

ಪಿ.ಆರ್. 508

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಗೃಹ ಪರಿಚಾರಕೆ ಭತ್ಯೆಯನ್ನು ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 17 ಎಸ್‌ಆರ್‌ಪಿ (1) 61 ದಿನಾಂಕ : 27-02-1961.
2. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 73 ಸಿಡಿಎ 78 ದಿನಾಂಕ : 15-05-1980.
3. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 40 ಸಿಡಿಎ 85 (ಪಿ) ದಿನಾಂಕ : 02-05-1987.
4. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 34 ಸಿಸೇನಿ 96 ದಿನಾಂಕ : 24-04-1997.
5. ಸರ್ಕಾರಿ ಆದೇಶ ಸಂಖ್ಯೆ : ಡಿಪಿಎಆರ್ 34 ಸಿಸೇನಿ 96 ದಿನಾಂಕ : 16-09-1997.
6. ತಿದ್ದುಪಡಿ ಆದೇಶ ಸಂಖ್ಯೆ : ಸಿಆಸುಇ 34 ಸಿಸೇನಿ 96 ದಿನಾಂಕ : 01-06-1998.
7. ಸರ್ಕಾರಿ ಆದೇಶ ಸಂಖ್ಯೆ : **ಸಿಆಸುಇ** 196 ಸಿಸೇನಿ 2001, ದಿನಾಂಕ 06-05-2006.
8. ಸರ್ಕಾರದ ಆದೇಶ ಸಂಖ್ಯೆ : **ಸಿಆಸುಇ** 232 ಸಿಸೇನಿ 2011, ದಿನಾಂಕ 22-10-2011.

**ಪ್ರಸ್ತಾವನೆ :**

ಮೇಲೆ (8)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸರ್ಕಾರದ ವಿವಿಧ ವರ್ಗದ ಅಧಿಕಾರಿಗಳಿಗೆ ಗೃಹ ಪರಿಚಾರಕೆ ಭತ್ಯೆಯನ್ನು ಪರಿಷ್ಕರಿಸಲಾಗಿದೆ. ಮೇಲೆ ಓದಲಾದ (7)ರ ಆದೇಶದಲ್ಲಿ ಸರ್ಕಾರದ ವಿಶೇಷ ಕಾರ್ಯದರ್ಶಿ / ಅಪರ ಕಾರ್ಯದರ್ಶಿಗಳಿಗೂ ಸಹ ಗೃಹ ಪರಿಚಾರಕ ಭತ್ಯೆಯನ್ನು ನೀಡಲಾಗಿದ್ದ. ಆದರೆ ಮೇಲೆ ಓದಲಾದ (8) ರಲ್ಲಿರುವ ಆದೇಶದಲ್ಲಿ ವಿಶೇಷ ಕಾರ್ಯದರ್ಶಿ, ಅಪರ ಕಾರ್ಯದರ್ಶಿ ಹುದ್ದೆಗಳು ಬಿಟ್ಟು ಹೋಗಿರುವುದಾಗಿ ತಿಳಿಸಿ ತಮಗೂ ಸಹ ಗೃಹ ಪರಿಚಾರಕ ಭತ್ಯೆಯನ್ನು ಹೆಚ್ಚಿಸಿ ಆದೇಶ ಹೊರಡಿಸುವಂತೆ ಕೋರಿಕೆಗಳು ಬಂದಿರುವ ಹಿನ್ನೆಲೆಯಲ್ಲಿ ಪ್ರಸ್ತಾವನೆಯನ್ನು ಪರಿಶೀಲಿಸಿ ಸದರಿ ಭತ್ಯೆಯನ್ನು ಸರ್ಕಾರದ ಅಪರ ಕಾರ್ಯದರ್ಶಿ. ವಿಶೇಷ ಕಾರ್ಯದರ್ಶಿ ವರ್ಗದ ಅಧಿಕಾರಿಗಳಿಗೂ ವಿಸ್ತರಿಸಲು ತೀರ್ಮಾನಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 232 ಸಿಸೇನಿ 2011, ಬೆಂಗಳೂರು, ದಿನಾಂಕ : 28ನೇ ಜನವರಿ 2012.**

ಸರ್ಕಾರದ ಅಪರ ಕಾರ್ಯದರ್ಶಿ, ವಿಶೇಷ ಕಾರ್ಯದರ್ಶಿಗಳಿಗೂ ಸಹ ಮೇಲೆ ಓದಲಾದ (8) ರಲ್ಲಿರುವ ಆದೇಶದಲ್ಲಿ ತಿಳಿಸಿರುವಂತೆ ಇಲಾಖಾ ಮುಖ್ಯಸ್ಥರು ಪಡೆಯುವಂತೆ ಮಾಸಿಕ ರೂ. 3,000/– (ಮೂರು ಸಾವಿರ ರೂಪಾಯಿಗಳು ಮಾತ್ರ) ಗಳ ಗೃಹಪರಿಚಾರಕ ಭತ್ಯೆಯನ್ನು ನೀಡಲು ಸರ್ಕಾರವು ಮಂಜೂರಾತಿ ನೀಡಿದೆ.

**"ಈ ಆದೇಶವು ದಿನಾಂಕ : 01–10–2011 ರಿಂದ ಜಾರಿಗೆ ಬರುತ್ತದೆ"**

ಅಧಿಕಾರಿಗಳ ನಿವಾಸಕ್ಕೆ ಕಛೇರಿಯಿಂದ ಗೃಹ ಪರಿಚಾರಕರನ್ನು ಒದಗಿಸದಿದ್ದಲ್ಲಿ ಮಾತ್ರ ಈ ಭತ್ಯೆಯನ್ನು ನೀಡಲಾಗುವುದು. ಈ ಭತ್ಯೆಯನ್ನು ಮಂಜೂರು ಮಾಡಲು ಈ ಹಿಂದೆ ವಿಧಿಸಿರುವ ಇತರೆ ನಿರ್ಬಂಧಗಳಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ : ಎಫ್‌ಡಿ 518 ಸೇವೆಗಳು–2/2011, ದಿನಾಂಕ : 02–01–2012 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪಿ. ಆನಂದಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಆಡಳಿತ–3)

ಪಿ.ಆರ್. 509

## ಕಂದಾಯ ಸಚಿವಾಲಯ

**ವಿಷಯ :** ಹೆಗ್ಗಡದೇವನಕೋಟೆ ಮಿನಿ ವಿಧಾನಸೌಧ ಕಟ್ಟಡದ ಮೂರನೇ ಹಂತದ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರದ ಪತ್ರ ಸಂಖ್ಯೆ : ಕಂಇ 31 ಡಬ್ಲ್ಯೂಬಿಆರ್ 2006, ದಿನಾಂಕ : 28–02–2006.
2. ಸರ್ಕಾರದ ಆದೇಶ ಸಂಖ್ಯೆ : ಕಂಇ 6 ಡಬ್ಲ್ಯೂಬಿಆರ್ 2009, ದಿನಾಂಕ : 15–02–2010.
3. ಪತ್ರ ಸಂಖ್ಯೆ : ಮುಅ/ಸಂಕದ/ಸಇ–3/2011–12, ದಿನಾಂಕ : 28–11–2011.

**ಪ್ರಸ್ತಾವನೆ :**

ಹೆಗ್ಗಡದೇವನಕೋಟೆ ಮಿನಿ ವಿಧಾನಸೌಧ ಕಟ್ಟಡ ನಿರ್ಮಾಣದ ಒಂದನೇ ಹಂತದ ರೂ. 100.00 ಲಕ್ಷಗಳ ಕಾಮಗಾರಿ ಅಂದಾಜಿಗೆ ಮೇಲೆ (1) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ಮತ್ತು ಎರಡನೇ ಹಂತದ ರೂ. 125.00 ಲಕ್ಷಗಳ ಕಾಮಗಾರಿ ಅಂದಾಜಿಗೆ ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

ಮುಖ್ಯ ಅಭಿಯಂತರರು, ಸಂಪರ್ಕ ಮತ್ತು ಕಟ್ಟಡಗಳು (ದಕ್ಷಿಣ) ಬೆಂಗಳೂರುರವರು ಮೇಲೆ (3) ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಹೆಗ್ಗಡದೇವನಕೋಟೆ ಪಟ್ಟಣದಲ್ಲಿ ಮಿನಿ ವಿಧಾನಸೌಧ ಕಟ್ಟಡದ ಬೇಸ್‌ಮೆಂಟ್ ಮಹಡಿ, ನೆಲ ಅಂತಸ್ತಿನ (ಭಾಗಶಃ) ಒಂದನೇ ಹಂತದ ಕಾಮಗಾರಿಯನ್ನು ಮತ್ತು ನೆಲ ಮಹಡಿಯ ಉಳಿಕೆ ಕಟ್ಟಡದ ಎರಡನೇ ಹಂತದ ಕಾಮಗಾರಿಯನ್ನು ಪೂರ್ಣಗೊಳಿಸಲಾಗಿದೆಯೆಂದು ವರದಿ ಮಾಡುತ್ತಾ, ಮೂರನೇ ಹಂತದಲ್ಲಿ ಮೊದಲನೇ ಮತ್ತು ಎರಡನೇ ಮಹಡಿ ಕಟ್ಟಡವನ್ನು ನಿರ್ಮಿಸಲು ರೂ. 395.00 ಲಕ್ಷಗಳ ಸವಿವರ ಅಂದಾಜುಪಟ್ಟಿ ಮತ್ತು ನಕ್ಷೆಯನ್ನು ಕಳುಹಿಸುತ್ತಾ ಆಡಳಿತಾತ್ಮಕ ಅನುಮೋದನೆಯನ್ನು ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಹೆಗ್ಗಡದೇವನಕೋಟೆ ಮಿನಿ ವಿಧಾನಸೌಧ ಕಟ್ಟಡದ ಮೊದಲನೇ ಮತ್ತು ಎರಡನೇ ಮಹಡಿಯ ಮೂರನೇ ಹಂತದ ರೂ. 395.00 ಲಕ್ಷ ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 06 ಡಬ್ಲ್ಯೂಬಿಆರ್ 2009, ಬೆಂಗಳೂರು, ದಿನಾಂಕ : 21ನೇ ಜನವರಿ 2012.**

ಹೆಗ್ಗಡದೇವನಕೋಟೆ ಮಿನಿ ವಿಧಾನಸೌಧ ಕಟ್ಟಡದ ಮೊದಲನೇ ಮತ್ತು ಎರಡನೇ ಮಹಡಿಯ ಮೂರನೇ ಹಂತದ ರೂ. 395.00 ಲಕ್ಷ (ರೂಪಾಯಿ ಮುನ್ನೂರ ತೊಂಭತ್ತೈದು ಲಕ್ಷಗಳು ಮಾತ್ರ) ಕಾಮಗಾರಿ ಅಂದಾಜಿಗೆ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

ಇದಕ್ಕೆ ತಗಲುವ ವೆಚ್ಚವನ್ನು 4059–80–051–0–30–386 (ಯೋಜನೆ) ಲೆಕ್ಕಶೀರ್ಷಿಕೆ ಅಡಿಯಲ್ಲಿ ಭರಿಸತಕ್ಕದ್ದು.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಕಾಯ್ದೆ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು 2000ರ ಪ್ರಕಾರ ಮಾಡತಕ್ಕದ್ದು.

ಈ ಕಾಮಗಾರಿಯನ್ನು ನಿಗದಿತ ಕಾಲ ಮಿತಿಯೊಳಗೆ ಪೂರ್ಣಗೊಳಿಸತಕ್ಕದ್ದು.

ಸರ್ಕಾರದ ಪೂರ್ವಾನುಮೋದನೆ ಇಲ್ಲದೆ ಕಾಮಗಾರಿಯಲ್ಲಿ ಯಾವುದೇ ಬದಲಾವಣೆ ಅಥವಾ ಹೆಚ್ಚುವರಿ ಐಟಂಗಳನ್ನು ಸೇರಿಸತಕ್ಕದ್ದಲ್ಲ.

ಸಕ್ಷಮ ಪ್ರಾಧಿಕಾರವು ಸದರಿ ಕಟ್ಟಡ ಕಾಮಗಾರಿಯ ಗುಣಮಟ್ಟ ಕಾಯ್ದುಕೊಳ್ಳುವಿಕೆಯನ್ನು ಕಾಲಕಾಲಕ್ಕೆ ಖಾತರಿಪಡಿಸಿಕೊಳ್ಳತಕ್ಕದ್ದು.

ಈ ಆದೇಶವನ್ನು ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿತ ಆರ್ಥಿಕ ಅಧಿಕಾರಗಳಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶ್ರೀರಾಮರೆಡ್ಡಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ).

ಪಿ.ಆರ್. 510

## ಕಂದಾಯ ಸಚಿವಾಲಯ

**ವಿಷಯ :** ಕಂದಾಯ ಭವನ ಕಟ್ಟಡ ಮತ್ತು ಜಿಲ್ಲಾಧಿಕಾರಿಗಳ ಅನೆಕ್ಸ್ ಕಟ್ಟಡ ಕಾಮಗಾರಿಗಳ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ : ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ : 25–08–2006.

2. ಸರ್ಕಾರದ ಆದೇಶ ಸಂಖ್ಯೆ : ಕಂಇ 72 ಡಬ್ಲ್ಯೂಬಿಆರ್ 2005, ದಿನಾಂಕ : 26–07–2011.

3. ಪತ್ರ ಸಂಖ್ಯೆ : ಕಗೃಮಂ/ಗೃಹ/ಕಂಭ/1086/2011–12, ದಿನಾಂಕ : 08–11–2011

**ಪ್ರಸ್ತಾವನೆ :**

ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿಯ ಆವರಣದಲ್ಲಿ ಖಾಲಿ ಇರುವ ಮೂರು ಎಕರೆ ನಾಲ್ಕು ಗುಂಟೆ ಜಮೀನಿನಲ್ಲಿ ಕಂದಾಯ ಭವನ ಕಟ್ಟಡವನ್ನು ರೂ. 31.00 ಕೋಟಿಗಳ ಅಂದಾಜು ವೆಚ್ಚದಲ್ಲಿ ಕರ್ನಾಟಕ ಗೃಹ ಮಂಡಳಿ ವತಿಯಿಂದ ನಿರ್ಮಾಣ ಮಾಡಲು ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಬೆಂಗಳೂರು ನಗರದ ಕೆಂಪೇಗೌಡ ತಾಲ್ಲೂಕು ಕಛೇರಿಯ ಆವರಣದಲ್ಲಿ ಕರ್ನಾಟಕ ಗೃಹ ಮಂಡಳಿ ವತಿಯಿಂದ ನಿರ್ಮಾಣ ಮಾಡುತ್ತಿರುವ ಕಂದಾಯ ಭವನ ಮತ್ತು ಜಿಲ್ಲಾಧಿಕಾರಿಗಳ ಅನೆಕ್ಸ್ ಕಟ್ಟಡದ ಕಾಮಗಾರಿ ಅಂದಾಜನ್ನು ರೂ. 31.00 ಕೋಟಿಗಳಿಂದ ರೂ. 37.45 ಕೋಟಿ ಪರಿಷ್ಕೃತ ಕಾಮಗಾರಿ ಅಂದಾಜಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿತ್ತು.

ಆಯುಕ್ತರು, ಕರ್ನಾಟಕ ಗೃಹ ಮಂಡಳಿ, ಬೆಂಗಳೂರುರವರು ಮೇಲೆ (3)ರಲ್ಲಿ ಓದಲಾದ ತಮ್ಮ ಪತ್ರದಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಯವರು ಕಂದಾಯ ಭವನ ಕಟ್ಟಡ ಪರಿವೀಕ್ಷಣೆ ಸಮಯದಲ್ಲಿ ಅಗತ್ಯವಾಗಿ ಕೈಗೊಳ್ಳಬೇಕಾದ ಕೆಲವೊಂದು ಹೆಚ್ಚುವರಿ ಕಾಮಗಾರಿಗಳನ್ನು ಆರ್ಥಿಕ ಹೊರೆ ಇಲ್ಲದಂತೆ ತೆಗೆದುಕೊಳ್ಳಲು ಸೂಚಿಸಿದಂತೆ ಹೆಚ್ಚುವರಿ ಕಾಮಗಾರಿಗಳ ಅನುಮೋದನೆ ಕುರಿತು ನಿಯೋಜಿಸಿದ ಸಮಿತಿಯ ಸೂಚನೆಯಂತೆ ಆಡಿಟೋರಿಯಂ ಕಟ್ಟಡದ ರೂ. 89,47,956.65ಗಳ ವೆಚ್ಚದ ಕೆಲವೊಂದು ಟೆಂಡರ್ಡ್ ಕಾಮಗಾರಿಗಳನ್ನು ಕೈಬಿಡಲು ಮತ್ತು ಅತಿ ಅವಶ್ಯಕವಾದ ರೂ. 59,41,682.00 ಗಳ ವೆಚ್ಚದ ಹೆಚ್ಚುವರಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ಅನುಮೋದನೆ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ಎಲ್ಲಾ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿಯ ಆವರಣದಲ್ಲಿ ನಿರ್ಮಾಣ ಮಾಡುತ್ತಿರುವ ಕಂದಾಯ ಭವನದ ಕಟ್ಟಡದ ರೂ. 89,47,956.65 ಗಳ ವೆಚ್ಚದ ಕೆಲವೊಂದು ಟೆಂಡರ್ಡ್ ಕಾಮಗಾರಿಗಳನ್ನು ಕೈಬಿಡಲು ಮತ್ತು ರೂ. 59,41,682.00 ಗಳ ವೆಚ್ಚದ ಹೆಚ್ಚುವರಿ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 72 ಡಬ್ಲ್ಯೂಬಿಆರ್ 2005, ಬೆಂಗಳೂರು, ದಿನಾಂಕ : 30ನೇ ಜನವರಿ 2011.**

ಬೆಂಗಳೂರು ನಗರದ ಕೆಂಪೇಗೌಡ ರಸ್ತೆಯಲ್ಲಿರುವ ತಾಲ್ಲೂಕು ಕಛೇರಿಯ ಆವರಣದಲ್ಲಿ ನಿರ್ಮಾಣ ಮಾಡುತ್ತಿರುವ ಕಂದಾಯ ಭವನದ ಕಟ್ಟಡದ ಈ ಕೆಳಗೆ ನಮೂದಿಸಿರುವ ರೂ. 89,47,956.65 ಗಳ ವೆಚ್ಚದ ಕಾಮಗಾರಿಗಳನ್ನು ಕೈಬಿಡಲು ಮತ್ತು ರೂ. 59,41,682.00 ಗಳ ವೆಚ್ಚದ ಹೆಚ್ಚುವರಿ ಕಾಮಗಾರಿಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

1. ಕೈಬಿಟ್ಟ ಕಾಮಗಾರಿಗಳು :

| ಕ್ರಮ ಸಂಖ್ಯೆ | ಕಾಮಗಾರಿಯ ವಿವರ | ಮೊತ್ತ |
|---|---|---|
| 1. | Anodised aluminium partitions, sixth floor | 67,356,64 |
| 2. | Anodised aluminium partitions, Seventh floor | 1,32,257.79 |
| 3. | Anodised aluminium partitions,Eighth floor | 67,494.44 |
| 4. | Acoustic cladding with rock wool walls for first floor | 29,23,025.00 |
| 5. | 12mm thick plaster of paris for Ciling | 5,62,065.00 |
| 6. | Providing Mathi wood frame for false ceiling | 4,56,330.00 |
| 7. | Providing and fixing seats | 3,644,000.00 |
| 8. | Sub total | 78,52,528.87 |
| 9. | 13.95% Tender Premium | 10,95,427.777 |
| 10. | **TOTAL AMOUNT** | **89,97,956.65** |

2. ಹೆಚ್ಚುವರಿ ಕಾಮಗಾರಿಗಳು :

| ಕ್ರಮ ಸಂಖ್ಯೆ | ಐಟಂಗಳು | ಮೊತ್ತ |
|---|---|---|
| 1. | Applying putty | 14,09,720.00 |
| 2. | Front entrance compound granite | 9,71,777.00 |
| 3. | Front entrance Landscaping work | 10,35,027.00 |
| 4. | Floor gap filling work in b/w Rcc beam to structural glazing frame | 2,87,496.00 |
| 5. | MS Fabrication work front entrance gate for buildings and duct in side ms Fabrication work | 5,70,336.00 |
| 6. | External yard lighting | 11,14,726.00 |
| 7. | Lobby floor lighting | 5,52,600.00 |
| | **TOTAL AMOUNT** | **59,41,682.00** |

ಇದಕ್ಕೆ ತಗಲುವ ವೆಚ್ಚವನ್ನು 2011–12ನೇ ಸಾಲಿನ "4059–80–051–0–42–386 (ಯೋಜನೆ)" ಲೆಕ್ಕಶೀರ್ಷಿಕೆ ಅಡಿ ಬಿಡುಗಡೆ ಮಾಡಿರುವ ಅನುದಾನದಲ್ಲಿ ಭರಿಸಿಕೊಂಡು ಉಳಿಕೆ ಮೊತ್ತವನ್ನು ಸರ್ಕಾರಕ್ಕೆ ಮರು ಪಾವತಿಸತಕ್ಕದ್ದು.

ಸಕ್ಷಮ ಪ್ರಾಧಿಕಾರವು ಸದರಿ ಕಟ್ಟಡ ಕಾಮಗಾರಿಯ ಗುಣಮಟ್ಟ ಕಾಯ್ದುಕೊಳ್ಳುವಿಕೆಯನ್ನು ಕಾಲಕಾಲಕ್ಕೆ ಖಾತರಿಪಡಿಸಿಕೊಳ್ಳತಕ್ಕದ್ದು.

ಈ ಕಾಮಗಾರಿಯನ್ನು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕ ಅಧಿನಿಯಮ 1999 ಮತ್ತು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ನಿಯಮಗಳು 2000 ಪ್ರಕಾರ ಮಾಡತಕ್ಕದ್ದು.

ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರತ್ಯಾಯೋಜಿತ ಆರ್ಥಿಕ ಅಧಿಕಾರದ ಮೇರೆಗೆ ಆದೇಶ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಿ. ಶ್ರೀರಾಮರೆಡ್ಡಿ**

ಪಿ.ಆರ್. 511 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂ ಸುಧಾರಣಾ ಕೋಶ).

## ಕಂದಾಯ ಸಚಿವಾಲಯ

**ವಿಷಯ :** 2011ನೇ ಸಾಲಿನಲ್ಲಿ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ, ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಜಿಲ್ಲಾಧಿಕಾರಿಗಳ ಬೇಡಿಕೆ ಪತ್ರಗಳು.

**ಪ್ರಸ್ತಾವನೆ :**

2011ನೇ ಸಾಲಿನಲ್ಲಿ ಮುಂಗಾರು ಮಳೆ ವಿಫಲದಿಂದಾಗಿ, ಬರ ಪರಿಸ್ಥಿತಿಯನ್ನು ಎದುರಿಸಲು ಕುಡಿಯುವ ನೀರು ಸರಬರಾಜು, ಜಾನುವಾರುಗಳಿಗೆ ಮೇವು ಒದಗಿಸುವುದು ಮತ್ತು ಜಾನುವಾರು ಸಂರಕ್ಷಣೆ ಕಾರ್ಯಗಳನ್ನು ಕೈಗೊಳ್ಳುವ ಸಲುವಾಗಿ ಮೇಲೆ ಓದಲಾದ ಪತ್ರಗಳಲ್ಲಿ, ಗದಗ, ಬಳ್ಳಾರಿ ಮತ್ತು ಉತ್ತರಕನ್ನಡ ಜಿಲ್ಲಾಧಿಕಾರಿಗಳು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನಲೆಯಲ್ಲಿ, ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಕಂಇ 190 ಟಿಎನ್‌ಆರ್ 2011 (1) ಬೆಂಗಳೂರು, ದಿನಾಂಕ : 01ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮುಂಗಾರು ಮಳೆಯ ಕೊರತೆಯಿಂದ ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಗೆ ಸಂಬಂಧಿಸಿದಂತೆ ಹಾನಿಗಳಿಗೆ ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರಮ ಸಂಖ್ಯೆ | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಗದಗ | 100.00 |
| 2 | ಬಳ್ಳಾರಿ | 100.00 |
| 3 | ಉತ್ತರ ಕನ್ನಡ | 50.00 |
| | ಒಟ್ಟು | 250.00 |

**(ರೂ. ಇನ್ನೂರ ಐವತ್ತು ಲಕ್ಷ ಮಾತ್ರ)**

1) ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಯೋಗಿಸುವುದು.
   (ಅ) ಮಾನವ / ಪ್ರಾಣಿ ಜೀವಹಾನಿ.
   (ಆ) ಬೆಳೆ ಹಾನಿ.
   (ಇ) ಕುಡಿಯುವ ನೀರಿನ ವ್ಯವಸ್ಥೆ
   (ಈ) ಜಾನುವಾರುಗಳ ಸಂರಕ್ಷಣೆ.
   (ಉ) ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ.
2) ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು.
3) ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ. ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.
4) ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು ಸಂಬಂಧಪಟ್ಟ ಜಿಲ್ಲೆಯ ಜಿಲ್ಲಾಧಿಕಾರಿಗಳು ಪೇಯೀಸ್ ರಸೀದಿ ಬಿಲ್ಲುಗಳನ್ನು ತಯಾರಿಸಿ ಮೇಲು ರುಜು ಮಾಡಿ ಜಿಲ್ಲಾ ಖಜಾನೆಯಿಂದ ಡ್ರಾ ಮಾಡಿ ಎಸ್.ಡಿ.ಆರ್.ಎಫ್ ಖಾತೆಗೆ ಜಮಾ ಮಾಡಿದ ನಂತರ ಪರಿಹಾರ ಕಾರ್ಯಗಳಿಗೆ ಉಪಯೋಗಿಸತಕ್ಕದ್ದು.

ಮೇಲಿನಂತೆ ಬಿಡುಗಡೆ ಮಾಡಿರುವ ಅನುದಾನವನ್ನು 2011–12ನೇ ಸಾಲಿನ ಆಯವ್ಯಯ ಲೆಕ್ಕ ಶೀರ್ಷಿಕೆ 2245–01–102–0–00–100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆ.ಇ: 968 ವೆಚ್ಚ–7/2011 ದಿನಾಂಕ : 16/10/2011 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್.ಎಂ. ಆನಂದಪ್ಪ**

ಪಿ.ಆರ್. 512 ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ವಿಪತ್ತು ನಿರ್ವಹಣೆ ಮತ್ತು ಸೇವೆಗಳು–2)

## ಕಂದಾಯ ಸಚಿವಾಲಯ

**ವಿಷಯ :** ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು, ಮಾಲೂರು ಗ್ರಾಮದ ಸ.ನಂ. 501 ರಲ್ಲಿ 25 ಗುಂಟೆ ಜಮೀನನ್ನು ಕೋಲಾರ ಜಿಲ್ಲಾ ಭೋವಿ ಜನಾಂಗದ ಸರ್ಕಾರಿ ನೌಕರರ ಸಂಘ (ರಿ) ಇವರಿಗೆ ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1) ಭೋವಿ ಜನಾಂಗದ ಸರ್ಕಾರಿ ನೌಕರರ ಸಂಘ (ರಿ) ಇವರ ಮನವಿ ದಿನಾಂಕ: 15-02-2009.
2) ಪ್ರಾದೇಶಿಕ ಆಯುಕ್ತರು, ಬೆಂಗಳೂರು ಇವರ ಪತ್ರ ದಿನಾಂಕ: 24-7-2009 ಮತ್ತು 15-1-2010.

**ಪ್ರಸ್ತಾವನೆ :**

ಪ್ರಧಾನ ಕಾರ್ಯದರ್ಶಿ, ಕೋಲಾರ ಜಿಲ್ಲಾ ಭೋವಿ ಜನಾಂಗದ ಸರ್ಕಾರಿ ನೌಕರರ ಸಂಘ (ರಿ) ಇವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯ ದಿ: 15.02.2009ರಲ್ಲಿ ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು, ಮಾಲೂರು ಗ್ರಾಮದ ಸ.ನಂ. 501ರಲ್ಲಿ 25 ಗುಂಟೆ ಜಮೀನು 1961ರಿಂದಲೂ ಸಂಘದ ಸ್ವಾಧೀನದಲ್ಲಿದ್ದು, ಭೋವಿ ಜನಾಂಗದ ವಿದ್ಯಾರ್ಥಿ ನಿಲಯಕ್ಕೆ ಹಾಗೂ ಶೈಕ್ಷಣಿಕ ಉದ್ದೇಶಕ್ಕೆ ಮಂಜೂರು ಮಾಡುವಂತೆ ಕೋರಿರುತ್ತಾರೆ.

ಪ್ರಾದೇಶಿಕ ಆಯುಕ್ತರ ಹಾಗೂ ಜಿಲ್ಲಾಧಿಕಾರಿಗಳ ವರದಿಯನ್ವಯ ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು, ಮಾಲೂರು ಗ್ರಾಮದ ಸ.ನಂ. 501 ರಲ್ಲಿ ಒಟ್ಟು ವಿಸ್ತೀರ್ಣ 1.00 ಎಕರೆ ಇದ್ದು, ಇದರಲ್ಲಿ 15 ಗುಂಟೆ ಜಮೀನನ್ನು ಭೋವಿ ಜನಾಂಗದ ವಿದ್ಯಾರ್ಥಿ ನಿಲಯ ಹಾಗೂ ಸಮುದಾಯ ಭವನಕ್ಕಾಗಿ ಮಂಜೂರು ಮಾಡಲಾಗಿರುತ್ತದೆ. ಸದರಿ ಜಮೀನಿನಲ್ಲಿ ಭೋವಿ ಹಾಸ್ಟೆಲ್ ಹಾಗೂ ಸಮುದಾಯ ಭವನ ನಿರ್ಮಾಣ ಹಂತದಲ್ಲಿರುತ್ತದೆ. ಉಳಿಕೆ 25 ಗುಂಟೆ ಜಮೀನನ್ನು ಭೋವಿ ಜನಾಂಗದ ವಿದ್ಯಾರ್ಥಿ ನಿಲಯ ಹಾಗೂ ಶೈಕ್ಷಣಿಕ ಸಂಸ್ಥೆಗಳನ್ನು ನಡೆಸಲು ಮಂಜೂರಾತಿಗಾಗಿ ಪ್ರಸ್ತಾಪಿಸಿರುತ್ತಾರೆ. ಸದರಿ ಜಮೀನಿನ ಮಾರ್ಗಸೂಚಿ ಬೆಲೆಯು ಎಕರೆಯೊಂದಕ್ಕೆ ರೂ. 15 ಲಕ್ಷ ಇರುವುದಾಗಿ ಆಗೂ ಸದರಿ ಜಮೀನು ಪುರಸಭೆ ವ್ಯಾಪ್ತಿಯಲ್ಲಿ ಬರುವುದಾಗಿ ವರದಿ ಮಾಡಿರುತ್ತಾರೆ.

ಕೋಲಾರ ಜಿಲ್ಲಾ ಭೋವಿ ಜನಾಂಗದ ಸರ್ಕಾರಿ ನೌಕರರ ಸಂಘವು ದಿ: 12.02.1993ರಲ್ಲಿ ಕರ್ನಾಟಕ ಸಂಘಗಳ ನೋಂದಣಿ ಅಧಿನಿಯಮ 1960 ರನ್ವಯ ನೋಂದಣಿಯಾಗಿರುತ್ತದೆ. ಸದರಿ ಸಂಘವು 2006ನೇ ಸಾಲಿನಿಂದ 2009ನೇ ಸಾಲಿನವರೆಗೆ ಆಡಿಟ್ ವರದಿಗಳನ್ನು ಒದಗಿಸಿರುತ್ತಾರೆ.

ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1)(ಡಿ)ರನ್ವಯ ಯಾವುದೇ ಕಂಪನಿ ಅಥವಾ ಸಂಘಕ್ಕೆ ಕೃಷಿ, ಕೈಗಾರಿಕೆ ಅಥವಾ ಯಾವುದೇ ಸಾರ್ವಜನಿಕ ಉದ್ದೇಶಕ್ಕಾಗಿ ಗುತ್ತಿಗೆ ಆಧಾರದ ಮೇಲೆ ಜಮೀನು ಮಂಜೂರು ಮಾಡಲು ಅವಕಾಶವಿರುತ್ತದೆ. ಸದರಿ ಪ್ರಕರಣದಲ್ಲಿ ಸಂಘವು ಭೋವಿ ಸಮುದಾಯದ ವಿದ್ಯಾರ್ಥಿ ನಿಲಯ ಹಾಗೂ ಶೈಕ್ಷಣಿಕ ಉದ್ದೇಶಕ್ಕಾಗಿ ಜಮೀನು ಮಂಜೂರು ಮಾಡುವಂತೆ ಕೋರಿದ್ದು, ಶೈಕ್ಷಣಿಕ ಚಟುವಟಿಕೆ ನಡೆಸುವ ಬಗ್ಗೆ ನಿಯಮ 19(5) (i)ರನ್ವಯ ಶಿಕ್ಷಣ ಇಲಾಖೆಯಿಂದ ಮಾನ್ಯತೆ ಪಡೆದಿರುವ ಬಗ್ಗೆ ಮಾಹಿತಿ ಒದಗಿಸಿರುವುದಿಲ್ಲ. ಆದರೆ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರನ್ವಯ ನಿಯಮ ಸಡಿಲಿಕೆಗೆ ಅಗತ್ಯವಾದ ಕಾರಣಗಳನ್ನು ನಮೂದಿಸಿ ಸದರಿ ನಿಯಮಗಳಲ್ಲಿನ ಯಾವುದೇ ಅವಕಾಶವನ್ನು ಸಡಿಲಿಸಲು ಸರ್ಕಾರಕ್ಕೆ ಅಧಿಕಾರ ಕಲ್ಪಿಸಲಾಗಿರುತ್ತದೆ.

ಈ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 3 ಎಲ್‌ಜಿಕೆ 2009, ದಿನಾಂಕ: 02-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕೋಲಾರ ಜಿಲ್ಲೆ, ಮಾಲೂರು ತಾಲ್ಲೂಕು, ಮಾಲೂರು ಗ್ರಾಮದ ಸ.ನಂ. 501 ರಲ್ಲಿ 25 ಗುಂಟೆ ಜಮೀನನ್ನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 27ರಲ್ಲಿನ ಅಧಿಕಾರವನ್ನು ಚಲಾಯಿಸಿ, ಕೋಲಾರ ಜಿಲ್ಲಾ ಭೋವಿ ಜನಾಂಗದ ಸರ್ಕಾರಿ ನೌಕರರ ಸಂಘಕ್ಕೆ ವಿದ್ಯಾರ್ಥಿ ನಿಲಯ ಹಾಗೂ ಶೈಕ್ಷಣಿಕ ಉದ್ದೇಶಕ್ಕಾಗಿ ಕರ್ನಾಟಕ ಭೂ ಮಂಜೂರಾತಿ ನಿಯಮಗಳು 1969ರ ನಿಯಮ 19(1)(ಎ) ಮತ್ತು 19(3) ರನ್ವಯ 30 ವರ್ಷಗಳ ಅವಧಿಗೆ ವಾರ್ಷಿಕ ಗುತ್ತಿಗೆ ದರವನ್ನು ಪ್ರಚಲಿತ ಮಾರುಕಟ್ಟೆ ದರದ ಶೇ. 10 ರಷ್ಟು ವಿಧಿಸಿ, ಸದರಿ ಗುತ್ತಿಗೆ ದರವನ್ನು ಪ್ರತಿ ಎರಡು ವರ್ಷಗಳಿಗೊಮ್ಮೆ ಶೇ. 10 ರಂತೆ ಹೆಚ್ಚಿಸುವ ಷರತ್ತಿಗೊಳಪಟ್ಟು ಗುತ್ತಿಗೆ ಆಧಾರದ ಮೇಲೆ ಮಂಜೂರು ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ರಾಮಸ್ವಾಮಿ**

ಪಿ.ಆರ್. 513

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಭೂ ಮಂಜೂರಾತಿ)

## ಸಹಕಾರ ಸಚಿವಾಲಯ

**ವಿಷಯ :** ಅಖಿಲ ಭಾರತ ವೀರಶೈವ ಮಹಾಸಭಾ (ರಿ) ಬೆಂಗಳೂರು, ಈ ಸಂಸ್ಥೆಗೆ ಆಡಳಿತಾಧಿಕಾರಿಯಾಗಿ ನೇಮಿಸಲಾಗಿರುವ ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಎಂಬುದನ್ನು ನಿರ್ದೇಶಕರು, ಕೃಷಿ ಮಾರುಕಟ್ಟೆ ಇಲಾಖೆ ಎಂದು ಬದಲಾಯಿಸುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸಇ/97/ಸಸಂನೊ/2011 ದಿ: 24/12/2011.
**2.** ನಿರ್ದೇಶಕರು, ಕೃಷಿ ಮಾರಾಟ ಇಲಾಖೆ ಇವರ ಪತ್ರ ಸಂಖ್ಯೆ:ಕೃ.ಮಾ.ಇ/ 110/ನಿಆಶಾ/2011-12 ದಿನಾಂಕ 28/1/2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅಖಿಲ ಭಾರತ ವೀರಶೈವ ಮಹಾ ಸಭಾ (ರಿ) ಬೆಂಗಳೂರು, ಈ ಸಂಘಕ್ಕೆ ದಿನಾಂಕ 26/12/2011 ರಿಂದ ಜಾರಿಗೆ ಬರುವಂತೆ ಡಾ॥ ಸಿ. ಸೋಮಶೇಖರ, ಐ.ಎ.ಎಸ್. ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ ಇವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಡಾ॥ ಸಿ. ಸೋಮಶೇಖರ, ಐ.ಎ.ಎಸ್., ಇವರು ತುಮಕೂರು ಜಿಲ್ಲೆಯ ಜಿಲ್ಲಾಧಿಕಾರಿ ಹುದ್ದೆಯಿಂದ ಕೃಷಿ ಮಾರಾಟ ಇಲಾಖೆಯ ನಿರ್ದೇಶಕರ ಹುದ್ದೆಗೆ ವರ್ಗಾವಣೆಗೊಂಡು ದಿನಾಂಕ 16/1/2012 ರಂದು ಈ ಹುದ್ದೆಯ

ಕಾರ್ಯಭಾರವಹಿಸಿಕೊಂಡಿರುವುದಾಗಿ ತಿಳಿಸಿರುತ್ತಾರೆ. ಆದ್ದರಿಂದ ದಿನಾಂಕ 24/12/2011ರ ಆದೇಶದಲ್ಲಿರುವ ಡಾ॥ ಸಿ. ಸೋಮಶೇಖರ, ಐ.ಎ.ಎಸ್., ಜಿಲ್ಲಾಧಿಕಾರಿಗಳು ತುಮಕೂರು ಜಿಲ್ಲೆ, ಎಂಬುದರ ಬದಲಾಗಿ ಡಾ॥ ಸಿ. ಸೋಮಶೇಖರ, ಐ.ಎ.ಎಸ್, ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಎಂದು ಬದಲಾವಣೆ ಮಾಡಿ ಪರಿಷ್ಕರಿಸಿ ಆದೇಶ ಹೊರಡಿಸಲು ಕೋರಿರುತ್ತಾರೆ.

ಈ ವಿಷಯವನ್ನು ಸರ್ಕಾರವು ಪರಿಶೀಲಿಸಿ, ಅದರಂತೆ ಪರಿಷ್ಕರಿಸಿದ ಆದೇಶ ಹೊರಡಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಇ 97 ಸಸಂನೋ 2011, ಬೆಂಗಳೂರು, ದಿನಾಂಕ: 2–2–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆದೇಶ ಸಂಖ್ಯೆ: 97 ಸಸಂನೋ 2011 ದಿನಾಂಕ 24/12/2011 ರಲ್ಲಿ ನಮೂದಿಸಿರುವ "ಡಾ॥ ಸಿ. ಸೋಮಶೇಖರ ಐ.ಎ.ಎಸ್, ಜಿಲ್ಲಾಧಿಕಾರಿಗಳು, ತುಮಕೂರು ಜಿಲ್ಲೆ," ಎಂಬುದರ ಬದಲಾಗಿ "ಡಾ॥ ಸಿ. ಸೋಮಶೇಖರ, ಐ.ಎ.ಎಸ್, ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು" ಎಂದು ಬದಲಾವಣೆ ಮಾಡಿದೆ.

ಉಳಿದಂತೆ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ.ಎಸ್. ವಿಶ್ವೇಶ್ವರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 514 ಸಹಕಾರ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಅನುರಾಗ್ ತಿವಾರಿ, ಐ.ಎ.ಎಸ್., ಇವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು ಆದೇಶ.

**ಓದಲಾಗಿದೆ:**
1) ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 83 ಅಸೇವ 2011 (IV) ದಿನಾಂಕ: 17.09.2011.
2) ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 168 ಎಸ್ಎಎಸ್ 2011 ದಿನಾಂಕ: 14.10.2011.
3) ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 588 ಎಸ್ಎಎಸ್ 2011 ದಿನಾಂಕ: 22.11.2011.
4) ಶ್ರೀ ಅನುರಾಗ ತಿವಾರಿ, ಐ.ಎ.ಎಸ್., ಇವರ ಟಿಪ್ಪಣಿ ಸಂಖ್ಯೆ: ಆಇ/ಉಕಾ–3/2011, ದಿನಾಂಕ: 21.12.2011.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ(1)ರಲ್ಲಿ ಓದಲಾದ ದಿನಾಂಕ: 17.09.2011ರ ಅಧಿಸೂಚನೆಯಲ್ಲಿ ಶ್ರೀ ಅನುರಾಗ್ ತಿವಾರಿ, ಐ.ಎ.ಎಸ್., ಇವರನ್ನು ಆಯುಕ್ತರು, ತುಮಕೂರು ನಗರ ಸಭೆ, ತುಮಕೂರು ಹುದ್ದೆಯಿಂದ ವರ್ಗಾಯಿಸಿ ಆದೇಶಿಸಿದ್ದರ ಮೇರೆಗೆ ಸದರಿಯವರು ದಿನಾಂಕ: 10.10.2011ರ ಪೂರ್ವಾಹ್ನ ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಟ್ಟು, ದಿನಾಂಕ: 10.10.2011ರ ಅಪರಾಹ್ನ ಸಿಆಸು ಇಲಾಖೆಯಲ್ಲಿ ವರದಿ ಮಾಡಿಕೊಂಡು ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ಮೇಲೆ ಕ್ರಮಾಂಕ(2)ರಲ್ಲಿ ಓದಲಾದ ದಿನಾಂಕ: 14.10.2011ರ ಅಧಿಸೂಚನೆಯ ಪ್ರಕಾರ ನೇಮಕಾತಿ ನಿರೀಕ್ಷಣೆಯಲ್ಲಿದ್ದ ಇವರಿಗೆ ದಿನಾಂಕ: 14.10.2011ರಿಂದ 17.11.2011ರವರೆಗೆ ಗಳಿಕೆ ರಜೆಯನ್ನು ಮಂಜೂರು ಮಾಡಲಾಗಿದೆ. ರಜೆಯ ನಂತರ ಅಧಿಕಾರಿಯವರು ದಿನಾಂಕ: 18.11.2011ರಿಂದ ನೇಮಕಾತಿ ನಿರೀಕ್ಷಣೆಯಲ್ಲಿ ಮುಂದುವರೆದಿದ್ದರು. ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ದಿನಾಂಕ: 22.11.2011ರ ಅಧಿಸೂಚನೆಯಲ್ಲಿ ಈ ಅಧಿಕಾರಿಯವರನ್ನು ಸರ್ಕಾರದ ಉಪ ಕಾರ್ಯದರ್ಶಿ–3, ಆರ್ಥಿಕ ಇಲಾಖೆ, ಬೆಂಗಳೂರು ಹುದ್ದೆಗೆ ನೇಮಿಸಿರುವ ಹಿನ್ನೆಲೆಯಲ್ಲಿ ಸದರಿಯವರು ದಿನಾಂಕ: 24.11.2011ರ ಪೂರ್ವಾಹ್ನ ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ ಕ್ರ.ಸಂ.(3)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಶ್ರೀ ಅನುರಾಗ್ ತಿವಾರಿ, ಐ.ಎ.ಎಸ್., ಇವರು ತಾವು ದಿನಾಂಕ: 10.10.2011 ರಿಂದ 23.11.2011ರವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿದ್ದಾರೆ.

ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 10 ಎಸ್ಐಎಸ್ 2012, ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಅನುರಾಗ್ ತಿವಾರಿ, ಐ.ಎ.ಎಸ್., ಇವರು ದಿನಾಂಕ: 10.10.2011ರಿಂದ 23.11.2011ರವರೆಗೆ ಅವಧಿಯನ್ನು ಈ ಕೆಳಕಂಡಂತೆ ಪರಿಗಣಿಸಿ ಸಕ್ರಮಗೊಳಿಸಿ ಆದೇಶಿಸಿದೆ.

| | |
|---|---|
| i) ದಿನಾಂಕ 10.10.2011ರಂದು | – ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 78ರ ಮೇರೆಗೆ ಸೇರುವಿಕೆಯ ಕಾಲ. |
| ii) ದಿನಾಂಕ 11.10.2011 ರಿಂದ 13.10.2011ರವರೆಗೆ | – ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ. |
| iii) ದಿನಾಂಕ: 14.10.2011 ರಿಂದ 17.11.2011 | – ಈಗಾಗಲೇ ಗಳಿಕೆ ರಜೆ ಮಂಜೂರು ಮಾಡಲಾಗಿದೆ. |
| iv) 18.11.2011 ರಿಂದ 23.11.2011 ರವರೆಗೆ | – ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 515 **ಯು.ಹೆಚ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಆಸುಇ (ಸೇವೆಗಳು–1)

## ವಸತಿ ಸಚಿವಾಲಯ

**ವಿಷಯ :** ಕೃಷಿ/ಸಾಗುವಳಿ ಜಮೀನಿನಲ್ಲಿ ವಿವಿಧ ವಸತಿ ಯೋಜನೆಗಳಡಿ ಮನೆಗಳನ್ನು ನಿರ್ಮಿಸುವ ಬಗ್ಗೆ

**ಓದಲಾಗಿದೆ:** ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ ರವರ ಪತ್ರ ಸಂಖ್ಯೆ: ಆರ್‌ಜಿಆರ್‌ಹೆಚ್‌ಸಿಎಲ್ 01 ಎಂಐಎಸ್ 06 2009, ದಿನಾಂಕ: 10.10.2011.

**ಪ್ರಸ್ತಾವನೆ :**

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಬಡತನ ರೇಖೆಗಿಂತ ಕೆಳಗಿನ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗದ ಬಡಜನರಿಗೆ ರಾಜ್ಯ ಸರ್ಕಾರದ ವಸತಿ ಯೋಜನೆಗಳಾದ ಬಸವ ವಸತಿ ಯೋಜನೆ, ಗ್ರಾಮೀಣ ಅಂಬೇಡ್ಕರ್ ಯೋಜನೆ ಮತ್ತು ಕೇಂದ್ರ ಪುರಸ್ಕೃತ ಇಂದಿರಾ ಆವಾಸ್ ಇತ್ಯಾದಿ ಯೋಜನೆಗಳಡಿ ಮನೆಗಳನ್ನು ನಿರ್ಮಿಸಿಕೊಳ್ಳಲು ಅವಕಾಶ ಕಲ್ಪಿಸಲಾಗಿದ್ದು, ಸ್ವಂತ ನಿವೇಶನವುಳ್ಳವರು ಅಥವಾ ಸರ್ಕಾರದ ನಿವೇಶನಗಳ ಯೋಜನೆಯಡಿ ನಿವೇಶನ ಪಡೆದವರು ಮಾತ್ರ ಈ ಯೋಜನೆಗಳಡಿಯಲ್ಲಿ ಮನೆಗಳನ್ನು ನಿರ್ಮಿಸಿಕೊಳ್ಳುತ್ತಿದ್ದಾರೆ. ಆದರೆ, ಕಾರಣಾಂತರಗಳಿಂದ ನಿವೇಶನಗಳನ್ನು ಹೊಂದಿರದ ಬಡಜನರು ಸರ್ಕಾರದ ವಸತಿ ಕಾರ್ಯಕ್ರಮಗಳ ಸೌಲಭ್ಯಗಳಿಂದ ವಂಚಿತರಾಗಿರುತ್ತಾರೆ. ಗ್ರಾಮೀಣ ಪ್ರದೇಶಗಳಲ್ಲಿ ಗ್ರಾಮಗಳ ಸಮೀಪದ ಸರ್ಕಾರಿ ಜಮೀನನ್ನು ವಿವಿಧ ಇಲಾಖೆಗಳು ಉಪಯೋಗಿಸಿಕೊಳ್ಳುತ್ತಿದ್ದು, ಬಡವರ ಮನೆಗಳ ನಿರ್ಮಾಣಕ್ಕಾಗಿ ಸರ್ಕಾರಿ ಜಮೀನಾಗಲಿ ಅಥವಾ ಖಾಸಗಿ ಜಮೀನಾಗಲಿ ಲಭ್ಯವಾಗುತ್ತಿಲ್ಲ. ಈ ಹಿನ್ನೆಲೆಯಲ್ಲಿ, ಗ್ರಾಮೀಣ ಪ್ರದೇಶಗಳಲ್ಲಿ ನಿವೇಶನವಿಲ್ಲದ ಅರ್ಹ ಫಲಾನುಭವಿಗಳು ತಮ್ಮ ಕೃಷಿ/ಸಾಗುವಳಿ ಜಮೀನಿನಲ್ಲಿ ಮನೆಗಳನ್ನು ನಿರ್ಮಿಸಿಕೊಳ್ಳಲು ಮುಂದೆ ಬಂದರೆ, ಅವರ ಕೃಷಿ ಜಮೀನಿನ ಒಂದು ನಿರ್ದಿಷ್ಟ ಭಾಗದಲ್ಲಿ ಮನೆಯನ್ನು ನಿರ್ಮಿಸಿಕೊಳ್ಳಲು ಅನುಮತಿಸುವ ಪ್ರಸ್ತಾವನೆಯನ್ನು ಸರ್ಕಾರದ ಉನ್ನತ ಮಟ್ಟದಲ್ಲಿ ಪರಿಶೀಲಿಸಲ್ಪಟ್ಟು ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಂ. ವಇ 55 ಹೆಚ್‌ಎಎಸ್ 2011, ಬೆಂಗಳೂರು, ದಿನಾಂಕ: 30ನೇ ಜನವರಿ 2012**

ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ ಸ್ವಂತ ಮನೆ ಅಥವಾ ನಿವೇಶನ ಇಲ್ಲದಿರುವ ಬಡತನ ರೇಖೆಗಿಂತ ಕೆಳಗಿನ ಮತ್ತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಜನಾಂಗದ ಬಡಜನರು ತಮ್ಮ ಕೃಷಿ/ಸಾಗುವಳಿ ಜಮೀನಿನ ಒಂದು ನಿರ್ದಿಷ್ಟ ಭಾಗದ ಗರಿಷ್ಠ ಎರಡು ಗುಂಟೆ ಜಮೀನಿನಲ್ಲಿ ರಾಜ್ಯ ಸರ್ಕಾರದ ಬಸವ ವಸತಿ ಯೋಜನೆ, ಗ್ರಾಮೀಣ ಅಂಬೇಡ್ಕರ್ ಯೋಜನೆ ಮತ್ತು ಕೇಂದ್ರ ಪುರಸ್ಕೃತ ಇಂದಿರಾ ಆವಾಸ್ ಇತ್ಯಾದಿ ಸರ್ಕಾರಿ ಯೋಜನೆಗಳ ಸಹಾಯಧನದೊಂದಿಗೆ, ವಸತಿ ಯೋಜನೆಗಳಡಿಯಲ್ಲಿರುವ ನಿಯಮಗಳಿಗೆ ಒಳಪಟ್ಟು ಮತ್ತು ಈ ಕೆಳಕಾಣಿಸಿದ ಷರತ್ತು ಮತ್ತು ನಿಬಂಧನೆಗಳಿಗೆ ಅನುಗುಣವಾಗಿ, ಮನೆಗಳನ್ನು ನಿರ್ಮಿಸಿಕೊಳ್ಳಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

2. ಅರ್ಹ ಕುಟುಂಬಗಳಿಗೆ ಕೃಷಿ/ಸಾಗುವಳಿ ಜಮೀನಿನ ಗರಿಷ್ಠ ಎರಡು ಗುಂಟೆಯಷ್ಟು ಜಮೀನನ್ನು "ಸರ್ಕಾರಿ ಯೋಜನೆಯಡಿ ಮನೆ ನಿರ್ಮಾಣಕ್ಕಾಗಿ ಭೂಮಿ" ಎಂದು ಘೋಷಿಸಲು ಆಯಾ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳಿಗೆ ಪ್ರಾಧಿಕಾರ ನೀಡಲಾಗಿದೆ.

3. ಈ ಯೋಜನೆಗಳಡಿ ಬ್ಯಾಂಕ್ ಸಾಲ ಪಡೆಯಲು ಫಲಾನುಭವಿಯು ಇಚ್ಛಿಸಿದಲ್ಲಿ ಆ ನಿವೇಶವನ್ನು ಅಡಮಾನವಿಡಲು ಅನುಮತಿ ನೀಡಬಹುದಾಗಿದೆ. ಈ ಯೋಜನೆಯಡಿ ಬ್ಯಾಂಕ್ ಸಾಲ ಮತ್ತು ಫಲಾನುಭವಿಯ ವಂತಿಕೆಯನ್ನು ಹೊರತುಪಡಿಸಿ, ಈಗಾಗಲೇ ಸರ್ಕಾರವು ನಿಗದಿಪಡಿಸಿರುವ ಸಹಾಯಧನವನ್ನು ಮಾತ್ರ ನೀಡಬಹುದಾಗಿದೆ.

4. ಈ ಸೌಲಭ್ಯವನ್ನು ಪಡೆದುಕೊಳ್ಳಲು ಫಲಾನುಭವಿಯು ಈ ಕೆಳಗಿನ ಷರತ್ತು ಮತ್ತು ನಿಬಂಧನೆಗಳನ್ನು ಪಾಲಿಸತಕ್ಕದ್ದು:

(ಅ) ಫಲಾನುಭವಿಯು ತನ್ನ ಜಮೀನಿರುವ ಗ್ರಾಮದಲ್ಲಿಯೇ ವಾಸವಾಗಿದ್ದು, ಸ್ವಂತ ಮನೆ ಅಥವಾ ನಿವೇಶನ ಹೊಂದಿರತಕ್ಕದ್ದಲ್ಲ. ನಿವೇಶನ ಹೊಂದಿರುವ ಷರತ್ತನ್ನು ಮಾತ್ರ ಹೊರತುಪಡಿಸಿ, ಸಂಬಂದಪಟ್ಟ ವಸತಿ ಯೋಜನೆಯಡಿ ಮನೆ ಹಂಚಿಕೆಗಾಗಿ ಅರ್ಹನಾಗಿರಬೇಕು.

(ಆ) ಪಡಿತರ ಚೀಟಿ/ಮತದಾರರ ಗುರುತಿನ ಚೀಟಿ ಅಥವಾ ಮತದಾರರ ಪಟ್ಟಿಯಲ್ಲಿ ಫಲಾನುಭವಿಯ ಹೆಸರಿದ್ದು, ಅದರ ಒಂದು ಪ್ರತಿಯನ್ನು ಒದಗಿಸತಕ್ಕದ್ದು.

(ಇ) ಫಲಾನುಭವಿಯು ಮನೆಯನ್ನು ಕಟ್ಟಿಕೊಳ್ಳಬಯಸುವ ಜಮೀನು ಫಲಾನುಭವಿಯ ಅಥವಾ ಫಲಾನುಭವಿಯ ಹೆಂಡತಿಯ/ಗಂಡನ ಹೆಸರಿನಲ್ಲಿರಬೇಕು.

(ಈ) ಫಲಾನುಭವಿ ನಿರ್ಮಿಸಿಕೊಳ್ಳುವ ಮನೆಯ ವಿಸ್ತೀರ್ಣವು 1200 ಚದರಡಿಗಳಿಗೆ ಮೀರತಕ್ಕದ್ದಲ್ಲ.

(ಉ) ಜಮೀನಿನಲ್ಲಿ ಎರಡು ಗುಂಟೆ ಮೀರದಂತೆ ಒಂದು ಬದಿಯಲ್ಲಿನ ನಿರ್ದಿಷ್ಟ ಭಾಗವನ್ನು "ಸರ್ಕಾರದ ವಸತಿ ಯೋಜನೆಯಡಿ ಮನೆ ನಿರ್ಮಾಣಕ್ಕಾಗಿ ಮಾತ್ರ" ಎಂದು ಅನುಮತಿಸಿರುವ ಬಗ್ಗೆ ಸಂಬಂಧಪಟ್ಟ ಪಂಚಾಯತ್ ಅಭಿವೃದ್ಧಿ ಅಧಿಕಾರಿಯಿಂದ ದೃಢೀಕರಣ ಪಡೆದು ಸಲ್ಲಿಸತಕ್ಕದ್ದು.

(ಊ) ಹೀಗೆ ಅನುಮತಿಸಿರುವ ಈ ಭಾಗವನ್ನು ವಸತಿಯಲ್ಲದೇ ಬೇರಾವುದೇ ಉದ್ದೇಶಕ್ಕಾಗಿ ಉಪಯೋಗಿಸುವುದಿಲ್ಲವೆಂದು ಮತ್ತು ಈ ಜಮೀನು ಅಥವಾ ಮನೆಯನ್ನು ಕನಿಷ್ಠ 15 ವರ್ಷಗಳವರೆಗೆ ಬೇರೆಯವರಿಗೆ ಮಾರಾಟ/ಭೋಗ್ಯ/ಪರಭಾರೆ ಮಾಡುವುದಿಲ್ಲವೆಂಬ ಬಗ್ಗೆ ಸ್ಟ್ಯಾಂಪು ಕಾಗದದಲ್ಲಿ ಮುಚ್ಚಳಿಕೆ ಬರೆದುಕೊಡಬೇಕು.

(ಋ) ಈ ಮೇಲ್ಕಂಡ ಷರತ್ತುಗಳಲ್ಲದೇ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ (ನಿಯಮಿತ) ದವರು ವಿಧಿಸುವ ಷರತ್ತುಗಳನ್ನೂ ಸಹ ಪಾಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 516

**ಬಿ. ಶಂಕರಪ್ಪ**

ಪೀಠಾಧಿಕಾರಿ–2, ವಸತಿ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ಹಣ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಡಿಇ 14 ಪಿಎಸ್‌ಆರ್ 2002 ದಿನಾಂಕ 31–05–2002
2. ಸರ್ಕಾರಿ ಆದೇಶ ಸಂಖ್ಯೆ: ಡಿಇ 15 ಪಿಎಸ್‌ಆರ್ 2002 ದಿನಾಂಕ 19–12–2002
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2011 ದಿನಾಂಕ 29–04–2011, 10–06–2011, 03–08–2011, 10–11–2011 ಮತ್ತು 22–12–2011.
4. ಕವಿಪ್ರನಿನಿ ಮತ್ತು ಎಲ್ಲಾ ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳ ಪತ್ರ ಸಂಖ್ಯೆ ಕೆಇಪಿಜಿಟಿ/ಪಿ14/2011–12/891 ದಿನಾಂಕ 29–12–2011.
5. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 43 ವೆಚ್ಚ–1/2012 ದಿನಾಂಕ: 20–01–2012

**ಪ್ರಸ್ತಾವನೆ :**

1. ಮೇಲೆ (1) ರಲ್ಲಿ ಓದಲಾದ ಸರ್ಕಾರದ ಅಧಿಸೂಚನೆಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಸುಧಾರಣಾ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ (ಕವಿಪ್ರನಿನಿ) ಉದ್ಯಮಗಳು ಮತ್ತು ಅದರ ಸಿಬ್ಬಂದಿಯು ವಿದ್ಯುಚ್ಛಕ್ತಿ ವಿತರಣಾ ಮತ್ತು ಚಿಲ್ಲರೆ ಸರಬರಾಜು ಕಂಪನಿಗಳಿಗೆ ವರ್ಗಾವಣೆ) ನಿಯಮಗಳು, 2002, ನಿಯಮ 4(13)(1) ಪ್ರಕಾರ ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಸೇವೆಗಳನ್ನು ಎರಡನೇ ವರ್ಗಾವಣೆ ದಿನಾಂಕದ ಜಾರಿಗೆ ಮೊದಲು ಮತ್ತು ಕರ್ನಾಟಕ ವಿದ್ಯುತ್ ಮಂಡಳಿ ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ (ಕವಿಕಪ್ರನಿನಿ) ನಿರ್ದಿಷ್ಟಪಡಿಸಲಾದ ಸಿಬ್ಬಂದಿಯು ಸಲ್ಲಿಸಿದ ಸೇವೆಗಳಿಗಾಗಿ ನಿವೃತ್ತಿ ವೇತನ ನಿಧಿಗಳು ಮತ್ತು ಶಾಸನ ಪ್ರದತ್ತ ಹಾಗೂ ಇತರೇ ಸಿಬ್ಬಂದಿ ಸಂಬಂಧಿತ ನಿಧಿಗಳ ಸಂಗ್ರಹಣೆಗೆ ರಾಜ್ಯ ಸರ್ಕಾರವು ಜವಾಬ್ದಾರಿಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲ ಮತ್ತು ನಿರ್ದಿಷ್ಟಪಡಿಸಲಾದ ಸಿಬ್ಬಂದಿಯ ಎರಡನೇ ವರ್ಗಾವಣೆ ಜಾರಿಯಾದ ಆಯಾಯ ದಿನಾಂಕದಲ್ಲಿದ್ದಂತೆ ನಿಧಿ ಸಂಗ್ರಹಣೆ ಮಾಡದ ಮಟ್ಟಿಗೆ ರಾಜ್ಯ ಸರ್ಕಾರವು ಹೊಣೆಯಾಗಿರುವುದೇ ಹೊರತು ವಿದ್ಯುತ್ ಸರಬರಾಜು ಕಂಪನಿಯದಲ್ಲವೆಂದು ತಿಳಿಸಲಾಗಿದೆ.

2. ಮೇಲೆ (2) ರಲ್ಲಿ ಓದಲಾದ ಸರ್ಕಾರ ಆದೇಶದ ಪ್ರಕಾರ, ಕವಿಪ್ರನಿನಿ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ನ್ನು, "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳೆಂದು" ಮರುನಾಮಕರಣ ಮಾಡಿ, Pay as You Go ಪದ್ಧತಿಯನ್ನು ಅನುಸರಿಸಿ ಕವಿಪ್ರನಿನಿ ಮತ್ತು ಎಸ್ಕಾಂಗಳ ನೌಕರರ ನಿವೃತ್ತಿ ಸೌಲಭ್ಯಗಳನ್ನು (Terminal Benefits) ಪಾವತಿಸಲು ಒಪ್ಪಿಗೆ ನೀಡಿದೆ.

3. 2011–12ನೇ ಸಾಲಿನ ಆಯವ್ಯಯದಲ್ಲಿ ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಉಪದಾನ ಟ್ರಸ್ಟ್‌ಗಳಿಗೆ ಪಿಂಚಣಿ ವಂತಿಗೆಗಾಗಿ "2801–80–101–1–13–106 (ಯೋಜನೇತರ)" ಲೆಕ್ಕಶೀರ್ಷಿಕೆಯಡಿ ರೂ. 400.00 ಕೋಟಿಗಳನ್ನು ನಿಗದಿಪಡಿಸಲಾಗಿರುತ್ತದೆ.

4. ಮೇಲೆ ಕ್ರಮಾಂಕ–(3)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ, 2011–12ನೇ ಸಾಲಿಗೆ ರೂ. 350 ಕೋಟಿಗಳಷ್ಟು, ಹಣ ಬಿಡುಗಡೆ ಮಾಡಿದೆ.

5. ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಪತ್ರದಲ್ಲಿ ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಅಧ್ಯಕ್ಷರು ಮತ್ತು ನಿರ್ದೇಶಕರು (ಹಣಕಾಸು), ಕವಿಪ್ರನಿನಿರವರು, 2011–12ರ ಆರ್ಥಿಕ ವರ್ಷಕ್ಕೆ ಉಳಿದ ಪಿಂಚಣಿ ಹಣ ರೂ. 50 ಕೋಟಿಗಳನ್ನು ಬಿಡುಗಡೆಗೊಳಿಸಲು ಸರ್ಕಾರವನ್ನು ಕೋರಿರುತ್ತಾರೆ.

6. ಕವಿಪ್ರನಿನಿ ಮತ್ತು ವಿಸಕಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳ ಕೋರಿಕೆಯನ್ನು ಸರ್ಕಾರವು ಪರಿಶೀಲಿಸಿ, 2011–12ನೇ ಸಾಲಿಗೆ ರೂ. 50 ಕೋಟಿಗಳ ಅನುದಾನ ಬಿಡುಗಡೆ ಮಾಡಲು ಈ ಸರ್ಕಾರಿ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 19 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ: 03–02–2012**

ಸರ್ಕಾರವು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ 2011–12ನೇ ಸಾಲಿನಲ್ಲಿ ಅಂತಿಮ ಕಂತಿನ ಪಿಂಚಣಿ ವಂತಿಗೆ ರೂ. 50 ಕೋಟಿಗಳನ್ನು (ಐವತ್ತು ಕೋಟಿ ರೂ.ಗಳು ಮಾತ್ರ), ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ಬಿಡುಗಡೆ ಮಾಡಿದೆ.

ಈ ವೆಚ್ಚವನ್ನು "2801–80–101–1–13–106" ಸಹಾಯಧನ (ಯೋಜನೇತರ) ಲೆಕ್ಕ ಶೀರ್ಷಿಕೆಯಡಿ ಭರಿಸತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆಯವರ ಮೇಲು ರುಜುವನ್ನು ಸ್ವೀಕೃತ ರಸೀದಿಯಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು "ಕವಿಪ್ರನಿನಿ ಮತ್ತು ಎಸ್ಕಾಂಗಳ ಪಿಂಚಣಿ ಮತ್ತು ಗ್ರಾಚ್ಯುಟಿ ಟ್ರಸ್ಟ್‌ಗಳಿಗೆ" ಹಣ ಪಡೆದ 2 ದಿನದೊಳಗೆ ಪೂರ್ಣವಾಗಿ ಪಾವತಿಸಿ ಸರ್ಕಾರಕ್ಕೆ ವರದಿ ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 43 ವೆಚ್ಚ–1/2012 ದಿನಾಂಕ: 20–01–2012ರ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 517

**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ನಗರಾಭಿವೃದ್ಧಿ ಸಚಿವಾಲಯ

**ತಿದ್ದುಪಡಿ ಆದೇಶ**

**ಸಂಖ್ಯೆ: ನಅಇ 170 ಬೆಂಭೂಸ್ವಾ 2011, ಬೆಂಗಳೂರು, ದಿನಾಂಕ: 01–02–2012**

ಸರ್ಕಾರದ ಆದೇಶ ಸಂಖ್ಯೆ: ನಅಇ 170 ಬೆಂಭೂಸ್ವಾ 2011 ದಿನಾಂಕ: 18–03–2011 ರ ಆದೇಶ ಭಾಗದಲ್ಲಿನ ಕೊನೆಯ ಸಾಲಿನಲ್ಲಿ "ಈ ಸೌಲಭ್ಯ ಅನ್ವಯವಾಗುವುದಿಲ್ಲವೆಂಬ ಷರತ್ತಿನೊಂದಿಗೆ ಆದೇಶಿಸಿದೆ" ಎಂಬುದಕ್ಕೆ ಬದಲಾಗಿ 'ಈ ಸೌಲಭ್ಯ ಅನ್ವಯವಾಗುವುದಿಲ್ಲವೆಂಬ ಷರತ್ತಿನೊಂದಿಗೆ ಹಾಗೂ ಈ ಕೆಳಕಂಡ ಷರತ್ತುಗಳನ್ನು ನಿಗದಿಪಡಿಸಿ ಆದೇಶಿಸಿದೆ' ಎಂಬುದಾಗಿ ತಿದ್ದಿ ಓದಿಕೊಳ್ಳತಕ್ಕದ್ದು.

1) ನಿವೇಶವನ್ನು ಅರ್ಕಾವತಿ ಬಡಾವಣೆಯ ರಚನೆಗಾಗಿ ಭೂಮಿಯನ್ನು ಸ್ವಾಧೀನಪಡಿಸಿಕೊಳ್ಳಲಾಗಿದೆ. ಆದ್ದರಿಂದ ಆ ಬಡಾವಣೆಯಲ್ಲಿಯೇ ನಿವೇಶನ ಹಂಚಿಕೆ ಮಾಡತಕ್ಕದ್ದು ಮತ್ತು ಸದರಿ ಬಡಾವಣೆಯಲ್ಲಿ ಅಂಥ ಹಂಚಿಕೆ ಕಾರ್ಯ ಸಾಧ್ಯವಾಗದಿದ್ದರೆ ಆ ಬಡಾವಣೆಯ ನಂತರ ನಿರ್ಮಿಸಿದ ಬಡಾವಣೆಯಲ್ಲಿ ಹಂಚಿಕೆ ಮಾಡತಕ್ಕದ್ದು. ಈ ಬಗ್ಗೆ ಪ್ರಾಧಿಕಾರದ ಸಭೆಯಲ್ಲಿ ತೀರ್ಮಾನ ಕೈಗೊಳ್ಳುವುದು.
2) ಈ ಆದೇಶದಂತೆ ಸೌಲಭ್ಯ ಪಡೆಯಲಿಚ್ಛಿಸುವವರು ಭೂಸ್ವಾಧೀನವನ್ನು ಪ್ರಶ್ನಿಸಿ ಯಾವುದೇ ನ್ಯಾಯಾಲಯದಲ್ಲಿ ದಾವೆಯನ್ನು ದಾಖಲಿಸಿದ್ದ ಪಕ್ಷದಲ್ಲಿ ಈ ಸೌಲಭ್ಯಪಡೆಯಲು ಅವಕಾಶವಿರುವುದಿಲ್ಲ. ಹಾಗೆ ದಾವೆ ಸಲ್ಲಿಸಿದ್ದಲ್ಲಿ ದಾವೆಯನ್ನು ಹಿಂಪಡೆಯತಕ್ಕದ್ದು ಮತ್ತು ಈ ಬಗ್ಗೆ ದಾಖಲೆಗಳನ್ನು ಪ್ರಾಧಿಕಾರಕ್ಕೆ ಸಲ್ಲಿಸುವುದು, ತಪ್ಪಿದ್ದಲ್ಲಿ ಈ ಆದೇಶದನ್ವಯ ನಿವೇಶನ ಪಡೆಯಲು ಅರ್ಹರಾಗಿರುವುದಿಲ್ಲ.
3) ಈ ಆದೇಶದಂತೆ ಸೌಲಭ್ಯ ಪಡೆಯಲಿಚ್ಛಿಸುವವರು ಯಾವುದೇ ಸಕ್ಷಮ ಪ್ರಾಧಿಕಾರದಲ್ಲಿ ಆಕ್ಷೇಪಣೆ ಸಲ್ಲಿಸಿದ್ದಲ್ಲಿ, ಸದರಿ ಆಕ್ಷೇಪಣೆ ಹಿಂತೆಗೆದುಕೊಂಡು ಹಿಂಪಡೆದ ಬಗ್ಗೆ ಲಿಖಿತ ಹೇಳಿಕೆ ಸಲ್ಲಿಸಬೇಕು.
4) ಸದರಿ ಸರ್ಕಾರದ ಆದೇಶದನ್ವಯ ಪಡೆದ ನಿವೇಶನದ ಮೇಲೆ ಯಾವುದೇ ನಿರ್ಮಾಣ ಕಾರ್ಯ ಪ್ರಾರಂಭಿಸುವ ಮೊದಲು ನಕ್ಷೆಯನ್ನು ಬೆಂಗಳೂರು ಅಭಿವೃದ್ಧಿ ಪ್ರಾಧಿಕಾರದಿಂದ ಮಂಜೂರು ಮಾಡಿಸಿಕೊಳ್ಳತಕ್ಕದ್ದು.
5) ಮೇಲೆ ಹೇಳಿರುವ ಆದೇಶದ ಪ್ರಕಾರ ನಿವೇಶನ ಪಡೆಯಲಿಚ್ಛಿಸುವವರು "The Bangalore Development Authority (Incentive scheme for Voluntary Surrender of Land) Rules, 1989" ರ ಪ್ರಕಾರ ನಿವೇಶನ ಪಡೆಯಲು ಅರ್ಹರಾಗಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ಚಂದ್ರಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

ಪಿ.ಆರ್. 518

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07–08–1995.
2. ಭಾರತೀಯ ಜನತಾ ಪಾರ್ಟಿಯ ರಾಜ್ಯಾಧ್ಯಕ್ಷರ ಪತ್ರ ಸಂ. ರಾಕಾ/ನಾನಿ/573/2011 ದಿನಾಂಕ: 26.10.2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರಲ್ಲಿ ಇರುವ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು, ಇವರ ಪತ್ರಗಳಲ್ಲಿನ ಶಿಫಾರಸ್ಸು ಮೇರೆಗೆ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 91 ಯೋವಿವಿ 2011, ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ, 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಆರು ಜನರನ್ನು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

**ಚಿತ್ರದುರ್ಗ ಜಿಲ್ಲೆ, ಮೊಳಕಾಲ್ಮೂರು ತಾಲ್ಲೂಕು**

| ಕ್ರ.ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀಮತಿ ಎಸ್.ಬಿ. ಸುಧಾ ಕೋಂ ಶ್ರೀ ಕಾ. ತಿಪ್ಪೇಸ್ವಾಮಿ, ಕೊಂಡ್ಲಹಳ್ಳಿ, ಮೊಳಕಾಲ್ಮೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ | ಮಹಿಳೆ |
| 2 | ಶ್ರೀ ಹೆಚ್.ಜಿ. ವಿರುಪಾಕ್ಷಪ್ಪ ಬಿನ್ ಶ್ರೀ ಹೆಚ್. ಗುಂಡಣ್ಣ, ರಾಂಪುರ, ಮೊಳಕಾಲ್ಮೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ. | ಸಾಮಾನ್ಯ |

| | | |
|---|---|---|
| 3 | ಶ್ರೀ ಕೆ.ಟಿ. ಶ್ರೀ ರಾಮರೆಡ್ಡಿ ಬಿನ್ ಶ್ರೀ ತಿಪ್ಪಯ್ಯ, ಮೊಗಲಹಳ್ಳಿ, ಮೊಳಕಾಲ್ಮೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ | ಸಾಮಾನ್ಯ |
| 4 | ಶ್ರೀ ತಿಪ್ಪಯ್ಯ ಮಾಸ್ಟರ್, ಕೋನಸಾಗರ, ಮೊಳಕಾಲ್ಮೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ | ಎಸ್.ಟಿ. |
| 5 | ಶ್ರೀ ಡಿ.ಎಂ. ಈಶ್ವರಪ್ಪ, ಮೊಳಕಾಲ್ಮೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ | ಬಿ.ಸಿ.ಎಂ |
| 6 | ಶ್ರೀ ಅಬ್ದುಲ್ ಖಯ್ಯೂಮ್, ಮೊಳಕಾಲ್ಮೂರು ತಾಲ್ಲೂಕು ಚಿತ್ರದುರ್ಗ ಜಿಲ್ಲೆ | ಅ.ಸಂ. |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 519

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ 1&2,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾರವಾರ ಜಿಲ್ಲೆಯ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಯೋಇ 309 ಪಿಟಿಪಿ 94, ದಿನಾಂಕ 07–08–1995.

2. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿಯ ರಾಜ್ಯಾಧ್ಯಕ್ಷರ ಪತ್ರ ಸಂ. ರಾಕಾ/ನಾನಿ/275, 276, 278 ಮತ್ತು 279/2011, ದಿನಾಂಕ: 27.6.2011.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ದಿನಾಂಕ: 07–08–1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರಲ್ಲಿ ಇರುವ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು, ಇವರ ಪತ್ರಗಳಲ್ಲಿನ ಶಿಫಾರಸ್ಸು ಮೇರೆಗೆ ಕಾರವಾರ ಜಿಲ್ಲೆಯ, ಹಳಿಯಾಳ, ಭಟ್ಕಳ, ಅಂಕೋಲಾ, ಜೋಯಿಡಾ ಮತ್ತು ಕುಮಟಾ ತಾಲ್ಲೂಕುಗಳಿಗೆ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಯೋಇ 84 ಯೋವಿವಿ 2009(ಭಾ), ಬೆಂಗಳೂರು, ದಿನಾಂಕ: 02ನೇ ಫೆಬ್ರವರಿ, 2012**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಅನುಬಂಧ–1ರಲ್ಲಿ ನಮೂದಿಸಿರುವಂತೆ ಸದಸ್ಯರುಗಳನ್ನು ಕಾರವಾರ ಜಿಲ್ಲೆಯ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ 1&2

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ಅನುಬಂಧ–1

**ಹಳಿಯಾಳ ತಾಲ್ಲೂಕು, ಕಾರವಾರ ಜಿಲ್ಲೆ**

| ಕ್ರಮ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ಮೇಘರಾಜ ರಮು ಮೇತ್ರಿ<br>ಮುಕ್ಕಾಂ: ಅಮ್ಮನ ಕೊಪ್ಪ, ಅಂಚೆ, ನಾಗಶೆಟ್ಟಿ ಕೊಪ್ಪ ತಾಲ್ಲೂಕು, ಹಳಿಯಾಳ್, ಕಾರವಾರ ಜಿಲ್ಲೆ | ಎಸ್.ಸಿ. |
| 2 | ಶ್ರೀ ರಾಮಚಂದ್ರ ಎಂ.ಫಾಡಿ<br>ಮುಕ್ಕಾಂ: ಅಂಚೆ: ಮಂಗಳವಾಡ, ತಾಲ್ಲೂಕು, ಹಳಿಯಾಳ, ಕಾರವಾರ ಜಿಲ್ಲೆ | ಹಿಂ.ವ. |
| 3 | ಶ್ರೀ ಗೋಪಾಲ ಕಲ್ಲಪ್ಪ ಜಲ್ಲಿ<br>ಮುಕ್ಕಾಂ: ಅಂಚೆ, ತೇರಗಾಂವ, ತಾಲ್ಲೂಕು ಹಳಿಯಾಳ, ಕಾರವಾರ ಜಿಲ್ಲೆ | ಅ.ಸಂ. |
| 4 | ಶ್ರೀಮತಿ ಶಾರದಾ ಗೋಪಿಚಂದ ರಾಠೋಡ<br>ಮುಕ್ಕಾಂ: ಅಮಚೆ, ಭಾಗವತಿ, ಹಳಿಯಾಳ, ಕಾರವಾರ ಜಿಲ್ಲೆ | ಮಹಿಳೆ |
| 5 | ಶ್ರೀ ನಾರಾಯಣ ರಮನಿಂಗ ಕೇಸರಕರ<br>ಮುಕ್ಕಾಂ ಅಂಚೆ, ಮುತ್ತಲಮುರಿ, ತಾಲ್ಲೂಕು, ಹಳಿಯಾಳ, ಕಾರವಾರ ಜಿಲ್ಲೆ | ಸಾಮಾನ್ಯ |
| 6 | ಶ್ರೀ ಬಾಬು ವಾಸಪ್ಪ ಪಾಗೋಜಿ<br>ಮುಕ್ಕಾಂ: ಅಂಚೆ, ಬೆಳವಟಗಿ, ತಾಲ್ಲೂಕು ಹಳಿಯಾಳ, ಕಾರವಾರ ಜಿಲ್ಲೆ | ಸಾಮಾನ್ಯ |

**ಕಾರವಾರ ಭಟ್ಕಳ ತಾಲ್ಲೂಕು**

| ಕ್ರಮ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀಮತಿ ರಾಧಾ ಶ್ರೀಧರ ಮೋಗೇರ<br>ಮುಕ್ಕಾಂ: ಅಂಚೆ: ಮುಂಡಳ್ಳಿ, ತಾಲ್ಲೂಕು, ಭಟ್ಕಳ ಕಾರವಾರ ಜಿಲ್ಲೆ | ಮಹಿಳೆ |
| 2 | ಶ್ರೀ ಹನ್ಮಂತ ನಾರಾಯಣ ನಾಯ್ಕ<br>ಮುಕ್ಕಾಂ: ಸರ್ಪನಕಟ್ಟೆ, ಅಂಚೆ, ಯಲ್ವಡಿಕವೂರ, ತಾಲ್ಲೂಕು, ಭಟ್ಕಳ, ಕಾರವಾರ ಜಿಲ್ಲೆ | ಸಾಮಾನ್ಯ |
| 3 | ಶ್ರೀ ಶ್ರೀನಿವಾಸ ಶಿವರಾಮ ನಾಯ್ಕ<br>ಮುಕ್ಕಾಂ: ಮೂಢಭಟ್ಕಳ, ಅಂಚೆ, ಮುಠ್ಠಳ್ಳಿ, ತಾಲ್ಲೂಕು: ಭಟ್ಕಳ, ಕಾರವಾರ ಜಿಲ್ಲೆ | ಸಾಮಾನ್ಯ |
| 4 | ಶ್ರೀ ಕೇಶವ ಮೊಗೇರ<br>ಮುಕ್ಕಾಂ: ಅಂಚೆ: ಗೊರ್ಟೆ, ತಾಲ್ಲೂಕು: ಭಟ್ಕಳ, ಕಾರವಾರ ಜಿಲ್ಲೆ | ಎಸ್.ಸಿ. |
| 5 | ಶ್ರೀ ರವಿ ಲಿಂಗಪ್ಪ ನಾಯ್ಕ<br>ಮುಕ್ಕಾಂ: ಅಂಚೆ, ಜಾಲಿ, ತಾಲ್ಲೂಕು, ಭಟ್ಕಳ, ಕಾರವಾರ ಜಿಲ್ಲೆ | ಹಿಂ.ವ. |
| 6 | ಶ್ರೀ ಧನ್ಯಕುಮಾರ್ ಭುಜಬಲ ಜೈನ್<br>ಮುಕ್ಕಾಂ: ಹಲ್ಯಾಣಿ, ಅಂಚೆ, ಹಾಡುವಳ್ಳಿ, ತಾಲ್ಲೂಕು, ಭಟ್ಕಳ, ಕಾರವಾರ ಜಿಲ್ಲೆ | ಅ.ಸಂ. |

**ಕಾರವಾರ ಜಿಲ್ಲೆ ಅಂಕೋಲಾ ತಾಲ್ಲೂಕು**

| ಕ್ರಮ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀಮತಿ ಪ್ರತಿಭಾ ಕಮಲಾಕರ ಬೋರಕರ<br>ಮುಕ್ಕಾಂ, ಬಳಲೆ, ಅಂಚೆ, ಮಾದನಗೇರಿ, ತಾಲ್ಲೂಕು, ಅಂಕೋಲಾ | ಎಸ್.ಸಿ. |
| 2 | ಶ್ರೀ ಗಿರಿಯಪ್ಪ ಆರ್. ನಾಯ್ಕ<br>ಮುಕ್ಕಾಂ: ಅಂಚೆ, ಹಿಲ್ಲೂರ, ತಾಲ್ಲೂಕು, ಅಂಕೋಲಾ | ಹಿಂ.ವ. |
| 3 | ಶ್ರೀ ನೂರೂದ್ದೀನ್ ಶೇಕ್<br>ಮುಕ್ಕಾಂ: ಕಾಕರಮಠ, ಅಂಚೆ, ಅಂಕೋಲಾ, ತಾಲ್ಲೂಕು: ಅಂಕೋಲಾ | ಅ.ಸಂ. |
| 4 | ಶ್ರೀಮತಿ ಪಾರ್ವತಿ ನಾಗೇಶ ಗೌಡ<br>ಮುಕ್ಕಾಂ: ಹೆಗ್ರೆ, ಅಂಚೆ, ಅಡಿಗೋಣ, ತಾಲ್ಲೂಕು, ಅಂಕೋಲಾ | ಮಹಿಳೆ |
| 5 | ಶ್ರೀ ರಾಮಕೃಷ್ಣ ಗಿರಿಯಣ್ಣ ನಾಯಕ್<br>ಮುಕ್ಕಾಂ: ಸೂರ್ವೆ, ತಾಲ್ಲೂಕು: ಅಂಕೋಲಾ | ಸಾಮಾನ್ಯ |
| 6 | ಶ್ರೀ ಸಂಜಯ ನಾಯ್ಕ<br>ಮುಕ್ಕಾಂ: ಅಂಚೆ, ಭಾವಿಕೇರಿ, ತಾಲ್ಲೂಕು, ಅಂಕೋಲಾ | ಸಾಮಾನ್ಯ |

**ಕಾರವಾರ ಜಿಲ್ಲೆ ಜೋಯಿಡಾ ತಾಲ್ಲೂಕು**

| ಕ್ರಮ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ಉಮೇಶ ತುಕಾರಾಮ ಗುಡೆ<br>ಮುಕ್ಕಾಂ: ಅಂಚೆ: ಮೌಳಂಗಿ, ತಾಲ್ಲೂಕು: ಜೋಯಿಡಾ. | ಎಸ್.ಸಿ. |
| 2 | ಶ್ರೀ ವಿರುಪಾಕ್ಷಪ್ಪ ಪರಪ್ಪ ಬಂಗಾರೆ<br>ಮುಕ್ಕಾಂ: ಅಂಚೆ, ಕುಂಬಾರವಾಡ, ತಾಲ್ಲೂಕು: ಜೋಯಿಡಾ. | ಹಿಂ.ವ. |
| 3 | ಶ್ರೀ ದಾಮೂದಖಾನ ಅಬ್ದುಲಖದರ ಪಠಾಣ<br>ಮುಕ್ಕಾಂ: ಮುಖ್ಯರಸ್ತೆ, ಅಂಚೆ, ಕ್ಯಾಸಲರಾಕ್, ತಾಲ್ಲೂಕು: ಜೋಯಿಡಾ. | ಅ.ಸಂ. |
| 4 | ಶ್ರೀಮತಿ ವಾಣಿ ರಾಘವೇಂದ್ರ ಪೈ<br>ಮುಕ್ಕಾಂ: ಪೋಠೋಳಿ, ಅಂಚೆ: ಪ್ರಧಾನಿ, ತಾಲ್ಲೂಕು: ಜೋಯಿಡಾ. | ಮಹಿಳೆ |
| 5 | ಶ್ರೀ ಶಿವಾಜಿ ಕೃಷ್ಣ ಗೋಸಾವಿ<br>ಮುಕ್ಕಾಂ: ಕೆ.ಪಿ.ಸಿ. ಕಾಲೋನಿ, ಅಂಚೆ: ರಾಮನಗರ, ತಾಲ್ಲೂಕು: ಜೋಯಿಡಾ. | ಸಾಮಾನ್ಯ |
| 6 | ಶ್ರೀ ಶಿವಪ್ರಸಾದ ಸೀತಾರಾಮ ಅಳ್ಕೆ<br>ಮುಕ್ಕಾಂ: ಅಂಚೆ: ಗುಂದ, ತಾಲ್ಲೂಕು: ಜೋಯಿಡಾ. | ಸಾಮಾನ್ಯ |

**ಕಾರವಾರ ಜಿಲ್ಲೆ ಕುಮಟಾ ತಾಲ್ಲೂಕು**

| ಕ್ರಮ. ಸಂ. | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ನಾರಾಯಣ ಕಣಿಯಾ ಮುಕ್ರಿ<br>ಮುಕ್ಕಾಂ: ಅಂಚೆ: ಹಂದಿಗೋಣ,ತಾಲ್ಲೂಕು: ಕುಮಟಾ | ಎಸ್.ಸಿ. |
| 2 | ಶ್ರೀ ಚಂದ್ರಶೇಖರ ನಾಯ್ಕ<br>ಮುಕ್ಕಾಂ: ನಾಡಮಾಸ್ಕೇರಿ, ಅಂಚೆ: ಗಂಗಾವಳಿ, ತಾಲ್ಲೂಕು: ಕುಮಟಾ. | ಹಿಂ.ವ. |
| 3 | ಶ್ರೀ ಪ್ರಕಾಶ ಅಬ್ರಾಹೀಂ ಮಡ್ತಾರ<br>ಮುಕ್ಕಾಂ: ಕೆಳಗಿನ ಕಂದವಳ್ಳಿ ಅಂಚೆ: ಕಲ್ಲಬ್ಬೆ ತಾಲ್ಲೂಕು: ಕುಮಟಾ. | ಅ.ಸಂ. |
| 4 | ಶ್ರೀಮತಿ ನಾಗರತ್ನ ಪ್ರಕಾಶ ನಾಯ್ಕ<br>ಮುಕ್ಕಾಂ: ಅಂಚೆ: ಹೊಲನಗದ್ದೆ ತಾಲ್ಲೂಕು: ಕುಮಟಾ. | ಮಹಿಳೆ |
| 5 | ಶ್ರೀ ಟಿ.ಪ. ಹೆಗಡೆ ಹುಳನಸೆಮಕ್ಕಿ<br>ಮುಕ್ಕಾಂ: ಅಂಚೆ: ಮುರೂರ, ತಾಲ್ಲೂಕು: ಕುಮಟಾ. | ಸಾಮಾನ್ಯ |
| 6 | ಶ್ರೀ ಶೇಶಗಿರಿ ಕೆ. ಶ್ಯಾನಭಾಗ<br>ಮುಕ್ಕಾಂ: ವಲಗದ್ದೆ, ಅಂಚೆ: ಕುಮಟಾ, ತಾಲ್ಲೂಕು: ಕುಮಟಾ. | ಸಾಮಾನ್ಯ |

**ಎಂ.ಜಿ. ಮುಳಕೂರ**
ಸರ್ಕಾರದ ಅಧೀನ ಕಾರ್ಯದರ್ಶಿ 1&2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

ಪಿ.ಆರ್. 520

## ಆರ್ಥಿಕ ಸಚಿವಾಲಯ

**ವಿಷಯ :** ವೈದ್ಯಕೀಯ ವೆಚ್ಚ ಮರುಪಾವತಿ ಮಾಡುವ ಅಧಿಕಾರವನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸುವ ಬಗ್ಗೆ.

**ಓದಲಾಗಿದೆ :** ಆದೇಶ ಸಂಖ್ಯೆ: ಸಿಆಸುಇ 34 ಎಸ್ಎಂಆರ್ 2011, ದಿನಾಂಕ: 28–09–2011.

**ಪ್ರಸ್ತಾವನೆ :**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 8 ಮತ್ತು 14(3)ಕ್ಕೆ ಸಂಬಂಧಪಟ್ಟ ಶೆಡ್ಯೂಲ್–I ಮತ್ತು II ರಲ್ಲಿ ಸೂಚಿಸಿರುವ ಸರ್ಕಾರದಿಂದ ಮಾನ್ಯತೆ ಹೊಂದಿರುವ ಆಸ್ಪತ್ರೆಗಳನ್ನು ಹೊರತುಪಡಿಸಿ, ಖಾಸಗಿ ಆಸ್ಪತ್ರೆಗಳಲ್ಲಿ ಸರ್ಕಾರಿ ನೌಕರರು ಪಡೆಯುವ ವೈದ್ಯಕೀಯ ಚಿಕಿತ್ಸೆಯ ವೆಚ್ಚವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ನೀಡುವ ಅಭಿಪ್ರಾಯದಂತೆ ಮರುಪಾವತಿಸಲು ನಿಯಮ 14ನ್ನು ಮತ್ತು ಇತರ ನಿಮಯಗಳನ್ನು ಸಡಿಲಿಸುವ ಅಧಿಕಾರವು ನಿಯಮ 31ರಲ್ಲಿ ಸರ್ಕಾರಕ್ಕೆ ಪ್ರದತ್ತವಾಗಿರುತ್ತದೆ. ನಿಯಮ 14ನ್ನು ಸಡಿಲಿಸುವ ಪ್ರಕರಣಗಳಲ್ಲಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಸಹಮತಿ ನೀಡಿ, ಆರ್ಥಿಕ ಇಲಾಖೆಯ ಸಹಮತಿಯನ್ನು ಪಡೆಯಲು ಸಲಹೆ ಮಾಡುತ್ತಿದೆ. ಅಂತಹ ಪ್ರಕರಣಗಳಲ್ಲಿ ಮಾತ್ರ ಆರ್ಥಿಕ ಇಲಾಖೆಯು ಪರಿಶೀಲಿಸಿ, ವೈದ್ಯಕೀಯ ವೆಚ್ಚವನ್ನು ಸರ್ಕಾರಿ ನೌಕರರಿಗೆ ಮರುಪಾವತಿಸಲು ಸಹಮತಿ ನೀಡಲಾಗುತ್ತಿದೆ.

ಇದರಿಂದಾಗಿ ಆಗುವ ವಿಳಂಬವನ್ನು ತಪ್ಪಿಸುವ ಸಲುವಾಗಿ ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 8 ಮತ್ತು 14(3)ಕ್ಕೆ ಸಂಬಂಧಪಟ್ಟ ಶೆಡ್ಯೂಲ್–I ಮತ್ತು II ರಲ್ಲಿ ಸೂಚಿಸಿರುವ ಸರ್ಕಾರದಿಂದ ಮಾನ್ಯತೆ ಹೊಂದಿರುವ ಆಸ್ಪತ್ರೆಗಳನ್ನು ಹೊರತುಪಡಿಸಿ, ಖಾಸಗಿ ಆಸ್ಪತ್ರೆಗಳಲ್ಲಿ ಸರ್ಕಾರಿ ನೌಕರರು ಪಡೆಯುವ ವೈದ್ಯಕೀಯ ಚಿಕಿತ್ಸೆಯ ವೆಚ್ಚವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ನೀಡುವ ಅಭಿಪ್ರಾಯದಂತೆ ಮರುಪಾವತಿಸಲು ಈ ಮೇಲೆ ಹೇಳಿದ ನಿಯಮಗಳ ನಿಯಮ 14ನ್ನು ಸಡಿಲಿಸಲು ನಿಯಮ 31 ರಿಂದ ಪ್ರದತ್ತವಾದ ಅಧಿಕಾರವನ್ನು ಮೇಲೆ ಓದಲಾದ ದಿನಾಂಕ: 28–09–2011ರ ಸಿಆಸುಇ 34 ಎಸ್ಎಂಆರ್ 2011ರ ಆದೇಶದಲ್ಲಿ ಆಡಳಿತ ಇಲಾಖೆಗಳ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾಗಿದೆ. ಈ ಹಿನ್ನಲೆಯಲ್ಲಿ ಮತ್ತು ಅಧಿಕಾರ ವಿಕೇಂದ್ರೀಕರಿಸುವ ಅಗತ್ಯತೆಯನ್ನು ಮನಗಣಿಸಿ, ಆರ್ಥಿಕ ಇಲಾಖೆಯು ಇಂತಹ ಪ್ರಕರಣಗಳಲ್ಲಿ ಆರ್ಥಿಕ ಇಲಾಖೆಯು ಅನುಮತಿಯನ್ನು ನೀಡಿದೆ ಎಂದು ಭಾವಿಸುವಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 01 ಟಿಎಫ್‌ಪಿ 2012 ಬೆಂಗಳೂರು, ದಿನಾಂಕ: 20–01–2012**

ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 8 ಮತ್ತು 14(3)ಕ್ಕೆ ಸಂಬಂಧಪಟ್ಟ ಶೆಡ್ಯೂಲ್–I ಮತ್ತು II ರಲ್ಲಿ ಸೂಚಿಸಿರುವ ಸರ್ಕಾರದಿಂದ ಮಾನ್ಯತೆ ಹೊಂದಿರುವ ಆಸ್ಪತ್ರೆಗಳನ್ನು ಹೊರತುಪಡಿಸಿ, ಖಾಸಗಿ ಆಸ್ಪತ್ರೆಗಳಲ್ಲಿ ಸರ್ಕಾರಿ ನೌಕರರು ಪಡೆಯುವ ವೈದ್ಯಕೀಯ ಚಿಕಿತ್ಸೆಯ ವೆಚ್ಚವನ್ನು ವಿಶೇಷ ಪ್ರಕರಣವೆಂದು ಪರಿಗಣಿಸಿ ನಿರ್ದೇಶಕರು ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು ಇವರು ನೀಡುವ ಅಭಿಪ್ರಾಯದಂತೆ ಮರುಪಾವತಿಸಲು ಈ ಮೇಲೆ ಹೇಳಿದ ನಿಯಮಗಳು 31 ರಿಂದ ಪ್ರದತ್ತವಾದ ಅಧಿಕಾರದನ್ವಯ ಎಲ್ಲಾ ವೃಂದದ ಅಧಿಕಾರಿ/ನೌಕರರ ರೂ. 1.00 ಲಕ್ಷ (ಒಂದು ಲಕ್ಷ) ದವರೆಗಿನ ವೈದ್ಯಕೀಯ ವೆಚ್ಚದ ಮರುಪಾವತಿ ಕುರಿತಂತೆ ಆಡಳಿತ ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳು ನಿಯಮ 14ನ್ನು ಸಡಿಲಿಸಿ, ವೈದ್ಯಕೀಯ ಚಿಕಿತ್ಸೆಯ ವೆಚ್ಚವನ್ನು ಮರುಪಾವತಿಸುವ ಬಗ್ಗೆ ಮಂಜೂರಾತಿ ನೀಡಲು ಆರ್ಥಿಕ ಇಲಾಖೆಯ ಅನುಮತಿ ಪಡೆದಿದೆ ಎಂದು ಭಾವಿಸತಕ್ಕದ್ದು. ಇಂತಹ ಪ್ರಕರಣಗಳನ್ನು ಪರಿಶೀಲಿಸುವಾಗ ಈ ಕೆಳಕಂಡ ಅಂಶಗಳನ್ನು ಮುಖ್ಯವಾಗಿ ಪರಿಶೀಲಿಸಿ, ಸೂಕ್ತ ನಿರ್ಣಯ ಕೈಗೊಳ್ಳತಕ್ಕದ್ದು.

1. ಸರ್ಕಾರಿ ನೌಕರನ ಮಕ್ಕಳು/ತಂದೆ/ತಾಯಿ ವೈದ್ಯಕೀಯ ವೆಚ್ಚದ ಮರುಪಾವತಿಯ ಪ್ರಕರಣಗಳಲ್ಲಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 2 ರನ್ವಯ ಸಂಪೂರ್ಣವಾಗಿ ಅವಲಂಬಿತರಾಗಿದ್ದಲ್ಲಿ ಮಾತ್ರ ವೈದ್ಯಕೀಯ ವೆಚ್ಚ ಮರುಪಾವತಿಯ ಪ್ರಕರಣಗಳನ್ನು ಪರಿಶೀಲಿಸತಕ್ಕದ್ದು.

2. ಸರ್ಕಾರಿ ನೌಕರನು ಕರ್ನಾಟಕ ಆರ್ಥಿಕ ಸಂಹಿತೆ 1958ರ ಕಲಂ 146 A (ii) ರ ಪ್ರಕಾರ ಸೂಕ್ತಕಾಲದಲ್ಲಿ ವೈದ್ಯಕೀಯ ವೆಚ್ಚದ ಮರುಪಾವತಿಯ ಕ್ಲೈಂ ಅನ್ನು ಮೂಲ ದಾಖಲೆಗಳೊಂದಿಗೆ ಸಲ್ಲಿಸಿದ್ದಾರೆಯೇ? ಇಲ್ಲದಿದ್ದಲ್ಲಿ ಕಾಲವಿಳಂಬ ಮನ್ನಾ ಮಾಡುವ ಬಗ್ಗೆ ಸಂಬಂದಪಟ್ಟ ಸಕ್ಷಮ ಪ್ರಾಧಿಕಾರವು ಆದೇಶ ಹೊರಡಿಸಿದ ನಂತರವೇ ವೈದ್ಯಕೀಯ ವೆಚ್ಚ ಮರುಪಾವತಿಗೆ ಸಹಮತಿಸತಕ್ಕದ್ದು.

3. ಕ್ಲೈಮು ಮಾಡಿರುವ ಚಿಕಿತ್ಸೆಯ ವೆಚ್ಚವನ್ನು ವಿಮಾ ಸಂಸ್ಥೆ ಇತ್ಯಾದಿ ಯಾವುದೇ ಇತರ ಮೂಲದಿಂದ ಹಿಂಪಡೆದಿರುವುದಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

4. ಸರ್ಕಾರಿ ನೌಕರರ ಪತ್ನಿ/ಪತಿಯ ರಾಜ್ಯ/ಕೇಂದ್ರ ಸರ್ಕಾರಿ/ಅರೆಸರ್ಕಾರಿ/ಖಾಸರಿ ಸಂಸ್ಥೆಯ ನೌಕರರಾಗಿದ್ದಲ್ಲಿ ಅವರು ಈ ಬಗ್ಗೆ ವೈದ್ಯಕೀಯ ವೆಚ್ಚದ ಮರುಪಾವತಿಗೆ ಅರ್ಜಿ ಸಲ್ಲಿಸಿರುವುದಿಲ್ಲವೆಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು.

5. ಸರ್ಕಾರಿ ನೌಕರರ ತಂದೆ/ತಾಯಿಯ ವೈದ್ಯಕೀಯ ವೆಚ್ಚದ ಮರುಪಾವತಿ ಪ್ರಕರಣಗಳಲ್ಲಿ ಕರ್ನಾಟಕ ಸರ್ಕಾರಿ ನೌಕರರ (ವೈದ್ಯಕೀಯ ಹಾಜರಾತಿ) ನಿಯಮಗಳು 1963ರ ನಿಯಮ 2 ರಲ್ಲಿನ ವಿವರಣೆ II ರಲ್ಲಿನ ಷರತ್ತು ಮತ್ತು ನಿಗಧಿಪಡಿಸಿರುವ ಮಾಸಿಕ ವರಮಾನ ಮೀರದ ಪ್ರಕರಣಗಳಲ್ಲಿ ಮಾತ್ರ ವೈದ್ಯಕೀಯ ಮರುವೆಚ್ಚ ಮರುಪಾವತಿಸಲು ಸಹಮತಿ ನೀಡತಕ್ಕದ್ದು.

6. ಯಾವುದೇ ಕಾರಣಕ್ಕೂ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶಕರು ಶಿಫಾರಸ್ಸು ಮಾಡುವ ಮೊಬಲಗನ್ನು ಮೀರಿ ವೈದ್ಯಕೀಯ ವೆಚ್ಚ ಹಿಂಬರಿಸತಕ್ಕದ್ದಲ್ಲ.

ವೈದ್ಯಕೀಯ ವೆಚ್ಚ ಮರುಪಾವತಿ ಮೊತ್ತ ಒಂದು ಲಕ್ಷಕ್ಕಿಂತ ಮೀರಿದ ಪ್ರಕರಣಗಳಲ್ಲಿ ನಿಯಮಾವಳಿಗಳಲ್ಲಿರುವ ಎಲ್ಲಾ ಷರತ್ತುಗಳನ್ನು ಕಡ್ಡಾಯವಾಗಿ ಪಾಲಿಸಿರುವುದನ್ನು ಖಚಿತಪಡಿಸಿಕೊಂಡು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಮತ್ತು ಆರ್ಥಿಕ ಇಲಾಖೆಗಳ ಅನುಮೋದನೆಗಾಗಿ ಪ್ರಸ್ತಾವನೆಗಳನ್ನು ಕಳುಹಿಸಿಕೊಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ. ಶಾಮರಾವ್**

ಸರ್ಕಾರದ ಉಪ ಕಾರ್ಯದರ್ಶಿ

ಪಿ.ಆರ್. 521 (ಆರ್ಥಿಕ ನಿಯಮಗಳು, ಆಯವ್ಯಯ

ಸಂಕಲನ ಮತ್ತು ಸಮಿತಿ ಶಾಖೆ)

ಆರ್ಥಿಕ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ನೆಮ್ಮದಿ ಗ್ರಾಮೀಣ ಟೆಲಿಸೆಂಟರ್‌ಗಳ ಮತ್ತು ತಾಲ್ಲೂಕು ಹಿಂಬದಿ ಕಛೇರಿಗಳ ನಿರ್ವಹಣೆಯನ್ನು ಪರ್ಯಾಯ ವ್ಯವಸ್ಥೆ ಮಾಡುವವರೆಗೆ, ಮಧ್ಯಂತರ ವ್ಯವಸ್ಥೆಯನ್ನಾಗಿ ದಿನಾಂಕ: 01-02-2012ರ ನಂತರವೂ ಮುಂದುವರೆಸುವ ಬಗ್ಗೆ.

**ಓದಲಾಗಿದೆ :**
1. ದಿನಾಂಕ: 17-12-2005ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ವಿಮಾಆ 2005.
2. ದಿನಾಂಕ: 22-04-2006ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ವಿಮಾಆ 2005.
3. ದಿನಾಂಕ: 22-04-2006ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ವಿಮಾಆ 2005. (ಅದೇ ದಿನಾಂಕ ಮತ್ತು ಸಂಖ್ಯೆಯ ಎರಡನೇ ಆದೇಶ).
4. ದಿನಾಂಕ: 04-09-2006ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ವಿಮಾಆ 2005.
5. ದಿನಾಂಕ: 04-09-2006ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 82 ವಿಮಾಆ 2005. (ಅದೇ ದಿನಾಂಕ ಮತ್ತು ಸಂಖ್ಯೆಯ ಎರಡನೇ ಆದೇಶ).
6. ದಿನಾಂಕ: 27-07-2007ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 01 ಆರ್‌ಐಟಿ 2007.
7. ದಿನಾಂಕ: 19-09-2011ರ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 2 ಆರ್‌ಐಟಿ 2011.

**ಪ್ರಸ್ತಾವನೆ:-**

1. ನೆಮ್ಮದಿ ಯೋಜನೆ ನಿರ್ವಹಣೆಯ ಉಸ್ತುವಾರಿ ಮಾಡುವ ಸಲುವಾಗಿ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಮೇಲೆ (1)ರಲ್ಲಿ ಓದಲಾದ ದಿನಾಂಕ: 17-12-2005ರ ಸರ್ಕಾರಿ ಆದೇಶದನ್ವಯ ಸಮಿತಿಯನ್ನು ರಚಿಸಲಾಯಿತು. ನೆಮ್ಮದಿ ಯೋಜನೆಯಡಿ ಹೋಬಳಿ ಮಟ್ಟದಲ್ಲಿ 800 ಟೆಲಿಸೆಂಟರ್‌ಗಳನ್ನು ಸ್ಥಾಪಿಸುವ ಸಲುವಾಗಿ ಕರೆದ ಟೆಂಡರ್‌ಗಳ ಪರಿಶೀಲನೆಗಾಗಿ ಟೆಂಡರ್ ಪರಿಶೀಲನಾ ಸಮಿತಿಯನ್ನು ಮೇಲೆ (2)ರಲ್ಲಿ ಓದಲಾದ ದಿನಾಂಕ 22-04-2006ರ ಸರ್ಕಾರಿ ಆದೇಶದನ್ವಯ ರಚಿಸಲಾಯಿತು. ಮೇಲೆ (3)ರಲ್ಲಿ ಓದಲಾದ ದಿನಾಂಕ: 22-04-2006ರ ಸರ್ಕಾರಿ ಆದೇಶದನ್ವಯ. ಸದರಿ ಟೆಂಡರ್‌ಗಳಿಗೆ ಸಂಬಂಧಿಸದಂತೆ ಟೆಂಡರ್ ಅಂಗೀಕರಿಸುವ ಸಮಿತಿಯನ್ನು ರಚಿಸಲಾಯಿತು. ಅದಾದ ನಂತರ. ಉತ್ತರ ಕರ್ನಾಟಕದ 14 ಜಿಲ್ಲೆಗಳಲ್ಲಿ 400 ಟೆಲಿಸೆಂಟರ್, 86 ತಾಲ್ಲೂಕು ಹಿಂಬದಿ (ಆರ್‌ಡಿಎಸ್) ಕಛೇರಿಗಳನ್ನು ಸ್ಥಾಪಿಸಲು ಮತ್ತು ನಿರ್ವಹಿಸಲು ಮೇಲೆ (4)ರಲ್ಲಿ ಓದಲಾದ ದಿನಾಂಕ: 04-09-2006ರ ಸರ್ಕಾರಿ ಆದೇಶದನ್ವಯ ನೆಮ್ಮದಿ ಯೋಜನೆಯ ಯಶಸ್ವಿ ಬಿಡ್ಡುದಾರರು (ಖಾಸಗಿ ಪಾಲುದಾರರು) ಆದ ಮೆ: 3ಐ ಇನ್ಫೋಟೆಕ್ ಲಿ., ನೇತೃತ್ವದ ಸಮೂಹದೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳಲು ಮಂಜೂರಾತಿಯನ್ನು

ನೀಡಲಾಯಿತು. ಅದೇ ರೀತಿ ದಕ್ಷಿಣ ಕರ್ನಾಟಕದ 13 ಜಿಲ್ಲೆಗಳಲ್ಲಿ 400 ಟೆಲಿಸೆಂಟರ್. 78 ತಾಲ್ಲೂಕು ಹಿಂಬದಿ (ಆರ್‌ಡಿಎಸ್) ಕಛೇರಿಗಳನ್ನು ಸ್ಥಾಪಿಸಲು ಮತ್ತು ನಿರ್ವಹಿಸಲು ಮೇಲೆ (5)ರಲ್ಲಿ ಓದಲಾದ ದಿನಾಂಕ: 04–09–2006ರ ಸರ್ಕಾರಿ ಆದೇಶದನ್ವಯ ಸದರಿ ಸಮೂಹದೊಂದಿಗೆ ಒಪ್ಪಂದವನ್ನು ಮಾಡಿಕೊಳ್ಳಲು ಮಂಜೂರಾತಿಯನ್ನು ನೀಡಲಾಯಿತು. ನೆಮ್ಮದಿ ಯೋಜನೆಯ ಪರಿಣಾಮಕಾರಿ ನಿರ್ವಹಣೆಗಾಗಿ ಮೇಲೆ (6)ರಲ್ಲಿ ಓದಲಾದ ದಿನಾಂಕ: 27–07–2007ರ ಸರ್ಕಾರಿ ಆದೇಶದನ್ವಯ ಜಿಲ್ಲಾಧಿಕಾರಿಯವರ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಸಮನ್ವಯ ಸಮಿತಿಯನ್ನು ರಚಿಸಲು ಮಂಜೂರಾತಿಯನ್ನು ನೀಡಲಾಗಿದೆ. ನಿಷ್ಕ್ರಮಣ ನಿರ್ವಹಣ ಯೋಜನೆ (exit management plan)ಯ ಮೌಲ್ಯಮಾಪನ ಮಾಡಿ ಅದನ್ನು ಅಂತಿಮಗೊಳಿಸಲು ಹಾಗೂ ಕೆಲವು ಬಾಕಿಯಿರಬಹುದಾದ ವಿಷಯಗಳನ್ನು ಬಗೆಹರಿಸಲು ನೆಮ್ಮದಿ ಯೋಜನೆಗೆ ಸಂಬಂಧಿಸಿದವರನ್ನು ಒಳಗೊಂಡ ಸಮಿತಿಯನ್ನು ಮೇಲೆ (7)ರಲ್ಲಿ ಓದಲಾದ ದಿನಾಂಕ:19–09–2011ರ ಆದೇಶದನ್ವಯ ರಚಿಸಲಾಗಿದೆ.

2. ನೆಮ್ಮದಿ ಯೋಜನೆಯ ಖಾಸಗಿ ಪಾಲುದಾರರೊಂದಿಗೆ ಮಾಡಲಾದ ಒಪ್ಪಂದದ ಅವಧಿ ದಿನಾಂಕ: 01–09–2006ರಂದು ಪ್ರಾರಂಭವಾಗಿ, ದಿನಾಂಕ: 30–09–2011ರಂದು ಮುಕ್ತಾಯವಾಗಿದೆ. ಆದಾದ ನಂತರ. ದಿನಾಂಕ: 01–10–2011 ರಿಂದ ಜಾರಿಯಲ್ಲಿದ್ದ ನಿಷ್ಕ್ರಮಣ ನಿರ್ವಹಣಾ ಅವಧಿ (exit management period) ದಿನಾಂಕ: 31–01–2012ಕ್ಕೆ ಕೊನೆಗೊಂಡಿದೆ. ನೆಮ್ಮದಿ ಗ್ರಾಮೀಣ ಟೆಲಿಸೆಂಟರ್‌ಗಳ ಮತ್ತು ತಾಲ್ಲೂಕು ಹಿಂಬದಿ ಕಛೇರಿಗಳ ನಿರ್ವಹಣೆಯನ್ನು, ಪರ್ಯಾಯ ವ್ಯವಸ್ಥೆ ಮಾಡುವವರೆಗೆ. ಮಧ್ಯಂತರ ವ್ಯವಸ್ಥೆಯನ್ನಾಗಿ, ದಿನಾಂಕ: 01–02–2012ರ ನಂತರವೂ ಮುಂದುವರೆಸುವ ಅಗತ್ಯತೆಯ ಬಗ್ಗೆ ಸರ್ಕಾರ ಪರಿಶೀಲಿಸಿದೆ. ಈ ಕೆಳಕಂಡ ಕಾರಣಗಳಿಗಾಗಿ ನೆಮ್ಮದಿ ಗ್ರಾಮೀಣ ಟೆಲಿಸೆಂಟರ್‌ಗಳ ಮತ್ತು ತಾಲ್ಲೂಕು ಹಿಂಬದಿ ಕಛೇರಿಗಳ ನಿರ್ವಹಣೆಯನ್ನು ಮುಂದುವರೆಸುವುದು ಅಗತ್ಯವೆಂದು ಸರ್ಕಾರ ಭಾವಿಸಿದೆ:–

(1) ಗ್ರಾಮೀಣ ಪ್ರದೇಶದ ನಿವಾಸಿಗಳಿಗೆ ವಿವಿಧ ಸೇವೆಗಳನ್ನು ಒದಗಿಸುತ್ತಿರುವ ನೆಮ್ಮದಿ ಕೇಂದ್ರಗಳ ಕಾರ್ಯನಿರ್ವಹಣೆಯನ್ನು ನಿಲ್ಲಿಸದೇ ಮುಂದುವರೆಸಬೇಕೆಂದು ದಿನಾಂಕ: 23–08–2011ರಂದು ನೆಮ್ಮದಿ ಕೇಂದ್ರಗಳ ನಿರ್ವಹಣೆಯ ಕುರಿತಂತೆ ಮಾನ್ಯ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ನಿರ್ಣಯಿಸಲಾಗಿದೆ.

(2) ಏಪ್ರಿಲ್, ಮೇ, ಜೂನ್, ಜುಲೈ ಮತ್ತು ಆಗಸ್ಟ್ ತಿಂಗಳುಗಳಲ್ಲಿ ಪಹಣಿ ಪತ್ರ, ಜಾತಿ ಮತ್ತು ವರಮಾನ ಪ್ರಮಾಣ ಪತ್ರಗಳ ಬೇಡಿಕೆ ಅತೀ ಹೆಚ್ಚಿರುತ್ತದೆ. ಸರ್ಕಾರದ ವಿವಿಧ ಯೋಜನೆಗಳ ಅಡಿಯಲ್ಲಿ ಲಭ್ಯವಿರುವ ಸೌಲಭ್ಯಗಳನ್ನು ಪಡೆಯುವ ಸಲುವಾಗಿ ಹಾಗೂ ಶಾಲಾ ಕಾಲೇಜು ದಾಖಲೆಗಾಗಿ ವಿದ್ಯಾರ್ಥಿಗಳು ಜಾತಿ ಮತ್ತು ವರಮಾನ ಪ್ರಮಾಣ ಪತ್ರಗಳನ್ನು ಪಡೆಯಬೇಕಾಗುತ್ತದೆ.

(3) ಸರ್ಕಾರ ಘೋಷಿಸುವ ವಿವಿಧ ಯೋಜನೆಗಳ ಅಡಿಯಲ್ಲಿ ಲಭ್ಯವಾಗುವ ಸೌಲಭ್ಯಗಳನ್ನು ಪಡೆಯುವ ಸಲುವಾಗಿ ರೈತರು ಪಹಣಿ ಪತ್ರಗಳನ್ನು ಪಡೆಯಬೇಕಾಗುತ್ತದೆ.

(4) ಮೇಲಿನ ಅಂಶ (2) ಮತ್ತು (3)ರ ಹಿನ್ನಲೆಯಲ್ಲಿ, ನೆಮ್ಮದಿ ಯೋಜನೆಯ ಮೂಲಕ ನೀಡುವ ಸೇವೆಗಳನ್ನು ನಿಲ್ಲಿಸಿದಲ್ಲಿ, ಇದರಿಂದಾಗಿ ಗ್ರಾಮೀಣ ಪ್ರದೇಶದ ನಿವಾಸಿಗಳಿಗೆ, ವಿಶೇಷವಾಗಿ ರೈತರಿಗೆ ಮತ್ತು ವಿದ್ಯಾರ್ಥಿಗಳಿಗೆ ತೊಂದರೆಯಾಗುತ್ತದೆ.

(5) ಮೇಲೆ ಹೇಳಿದಂತೆ, ನೆಮ್ಮದಿ ಯೋಜನೆಯ ಖಾಸಗಿ ಪಾಲುದಾರರೊಂದಿಗೆ ಮಾಡಲಾದ ಒಪ್ಪಂದದ ಅವಧಿ ದಿನಾಂಕ: 01–09–2006 ರಂದು ಪ್ರಾರಂಭವಾಗಿ, ದಿನಾಂಕ: 30–09–2011 ರಂದು ಮುಕ್ತಾಯವಾಗಿದೆ. ಆದಾದ ನಂತರ, ದಿನಾಂಕ: 01–10–2011ರಿಂದ ಜಾರಿಯಲ್ಲಿದ್ದ ನಿಷ್ಕ್ರಮಣ ನಿರ್ವಹಣಾ ಅವಧಿ (exit management period) ದಿನಾಂಕ: 31–01–2012ಕ್ಕೆ ಕೊನೆಗೊಂಡಿದೆ. ಹೊಸ ವ್ಯವಸ್ಥೆಯನ್ನು ಜಾರಿಗೆ ತರುವ ಪ್ರಕ್ರಿಯೆ ಜಾರಿಯಲ್ಲಿದೆ. ಆ ಪ್ರಕ್ರಿಯೆಯನ್ನು ಪೂರ್ಣಗೊಳಿಸಲು ಸಾಕಷ್ಟು ಕಾಲಾವಕಾಶ ಬೇಕಾಗುತ್ತದೆ. ಅದು ಪೂರ್ಣಗೊಳ್ಳುವವರೆಗೆ ಒಂದು ಪರ್ಯಾಯ/ತಾತ್ಕಾಲಿಕ ವ್ಯವಸ್ಥೆಯನ್ನು ಕೂಡಲೇ ಜಾರಿಗೆ ತರುವುದು ಅಗತ್ಯವಾಗಿದೆ.

3. ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 01 ಯೋಜನೆ 2012 (ಭಾಗ–2) ದಿನಾಂಕ : 07ನೇ ಫೆಬ್ರವರಿ 2012.**

4. ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಗಾಗಿ ನೆಮ್ಮದಿ ಗ್ರಾಮೀಣ ಟೆಲಿಸೆಂಟರ್‌ಗಳ ಮತ್ತು ತಾಲ್ಲೂಕು ಹಿಂಬದಿ ಕಛೇರಿಗಳ ನಿರ್ವಹಣೆಯನ್ನು, ಪರ್ಯಾಯ ವ್ಯವಸ್ಥೆ ಮಾಡುವವರೆಗೆ, ಮಧ್ಯಂತರ ವ್ಯವಸ್ಥೆಯನ್ನಾಗಿ, ದಿನಾಂಕ: 01–02–2012ರ ನಂತರವೂ ಮುಂದುವರೆಸತಕ್ಕದೆಂದು ಈ ಮೂಲಕ ಆದೇಶಿಸಿದೆ.

5. ಈ ಉದ್ದೇಶಕ್ಕಾಗಿ ನೆಮ್ಮದಿ ಗ್ರಾಮೀಣ ಟೆಲಿಸೆಂಟರ್‌ಗಳ ಮತ್ತು ತಾಲ್ಲೂಕು ಹಿಂಬದಿ ಕಛೇರಿಗಳ ನಿರ್ವಹಣೆಯನ್ನು, ಹೊಸ (ಪರ್ಯಾಯ) ವ್ಯವಸ್ಥೆ ಮಾಡುವವರೆಗೆ, ಮಧ್ಯಂತರ ವ್ಯವಸ್ಥೆಯನ್ನಾಗಿ, ದಿನಾಂಕ: 01–02–2012 ರಿಂದ ಜಾರಿಗೆ ಬರುವಂತೆ ಮೆ: ಕರ್ನಾಟಕ ರಾಜ್ಯ ವಿದ್ಯುನ್ಮಾನ ಅಭಿವೃದ್ಧಿ ನಿಗಮ ನಿಯಮಿತ (Karnataka State Electronics Development Corporation Limited) ಗೆ ವಹಿಸತಕ್ಕದೆಂದು ಸಹ ಈ ಮೂಲಕ ಆದೇಶಿಸಿದೆ.

6. ಈ ಕುರಿತಂತೆ ವಿವರವಾದ ಸರ್ಕಾರಿ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಪ್ರಶಾಂತ್‌ಕುಮಾರ್ ಎಸ್.ಬಿ.**

ಪೀಠಾಧಿಕಾರಿ–2

ಪಿ.ಆರ್. 522 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀಮತಿ ಲತಾ ಕೃಷ್ಣ ರಾವ್, ಐ.ಎ.ಎಸ್., ಇವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 660 ಎಸ್‌ಎಎಸ್ 2011, ದಿನಾಂಕ: 31–12–2011.

2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 74 ಎಸ್‌ಎಎಸ್ 2012, ದಿನಾಂಕ: 25–01–2012.

3. ಶ್ರೀಮತಿ ಲತಾ ಕೃಷ್ಣ ರಾವ್, ಐ.ಎ.ಎಸ್., ಇವರ ಟಿಪ್ಪಣಿ ಸಂಖ್ಯೆ: ಕಸಂವಾಪ್ರ:18:ಪ್ರಕಾ:12, ದಿನಾಂಕ: 01–02–2012.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 31–12–2011ರ ಅಧಿಸೂಚನೆಯಲ್ಲಿ ಶ್ರೀಮತಿ ಲತಾ ಕೃಷ್ಣ ರಾವ್, ಐ.ಎ.ಎಸ್., ಇವರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ), ಬೆಂಗಳೂರು ಹುದ್ದೆಯಿಂದ ವರ್ಗಾಯಿಸಿ ಆದೇಶಿಸಿದ್ದರ ಮೇರೆಗೆ ಸದರಿಯವರು ದಿನಾಂಕ: 02–01–2012ರ ಪೂರ್ವಾಹ್ನ ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಟ್ಟು, ದಿನಾಂಕ: 02–01–2012ರ ಅಪರಾಹ್ನ ಸಿಆಸು ಇಲಾಖೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದನಂತರ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 25–01–2012ರ ಅಧಿಸೂಚನೆಯಲ್ಲಿ ಈ ಅಧಿಕಾರಿಯವರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಪ್ರವಾಸೋದ್ಯಮ ಇಲಾಖೆ, ಬೆಂಗಳೂರು ಹುದ್ದೆಗೆ ನೇಮಿಸಿದ್ದು, ದಿನಾಂಕ: 27–01–2012ರ ಪೂರ್ವಾಹ್ನ ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀಮತಿ ಲತಾ ಕೃಷ್ಣ ರಾವ್, ಐ.ಎ.ಎಸ್., ಇವರು ತಾವು ದಿನಾಂಕ: 02–01–2012 ರಿಂದ 26–01–2012ರ ವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸಿ ಸೂಕ್ತ ಅದೇಶ ಹೊರಡಿಸುವಂತೆ ಕೋರಿದ್ದಾರೆ.

ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 27 ಎಸ್‌ಐಎಸ್ 2012, ಬೆಂಗಳೂರು, ದಿನಾಂಕ : 09ನೇ ಫೆಬ್ರವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀಮತಿ ಲತಾ ಕೃಷ್ಣ ರಾವ್, ಐ.ಎ.ಎಸ್., ಇವರು ದಿನಾಂಕ: 02–01–2012 ರಿಂದ 26–01–2012ರ ವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸರ್ಕಾರವು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಸಕ್ರಮಗೊಳಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/1/ಟಿಎಫ್‌ಪಿ/96, ದಿನಾಂಕ: 10–07–96ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಹೆಚ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 523 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ. (ಸೇವೆಗಳು–1)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಇಲಾಖಾ ವಿಚಾರಣೆ ನಡೆಸಲು ವಿಚಾರಣಾಧಿಕಾರಿಯಾಗಿ ನೇಮಕಗೊಂಡ ಸರ್ಕಾರದ ಅಧಿಕಾರಿಗಳಿಗೆ ಸಂಭಾವನೆ ನೀಡುವ ಬಗ್ಗೆ.

**ಪ್ರಸ್ತಾವನೆ :**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರನ್ವಯ ಸರ್ಕಾರಿ ನೌಕರರ ವಿರುದ್ಧ ಇಲಾಖಾ ವಿಚಾರಣೆ ಜರುಗಿಸಲು ಸರ್ಕಾರಿ ಸೇವೆಯಲ್ಲಿರುವ ಅಧಿಕಾರಿಗಳನ್ನು ವಿಚಾರಣಾಧಿಕಾರಿಯಾಗಿ ನೇಮಿಸುವುದು ಒಂದು ಸಾಮಾನ್ಯ ವಾಡಿಕೆಯಾಗಿದೆ. ಆದರೆ ಸರ್ಕಾರಿ ಸೇವೆಯಲ್ಲಿರುವ ಅಧಿಕಾರಿಗಳನ್ನು ವಿಚಾರಣಾಧಿಕಾರಿಗಳಾಗಿ ನೇಮಕ ಮಾಡಿದಾಗ ಅವರಿಗೆ ಯಾವುದೇ ಸಂಭಾವನೆಯನ್ನು ನೀಡುತ್ತಿಲ್ಲ. ಸಾಮಾನ್ಯವಾಗಿ ಕ್ಲಿಷ್ಟವಾದ ವಿಚಾರಣೆಗಳನ್ನು ನಡೆಸಲು ನಿವೃತ್ತ ನ್ಯಾಯಾಧೀಶರಿಗೆ ವಹಿಸಲಾಗುತ್ತಿದ್ದರೂ, ಇತರ ಉಳಿದ ವಿಚಾರಣೆಗಳಲ್ಲಿ ಸರ್ಕಾರದ ಅಧಿಕಾರಿಗಳನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಕಮಾಡುತ್ತಿದ್ದು ಅಂತಹ ವಿಚಾರಣೆಗಳ ಸಂಖ್ಯೆಯು ಹೆಚ್ಚಾಗುತ್ತಿದೆ. ಯಾವುದೇ ಇಲಾಖಾ ವಿಚಾರಣೆಯಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಅನುಸರಿಸುವ ಕ್ರಮ ಮತ್ತು ಅದಕ್ಕಾಗಿ ಪಡುವ ಶ್ರಮವು ಸರ್ಕಾರದ ಅಧಿಕಾರಿಗಳನ್ನೂ ಇಲಾಖಾ ವಿಚಾರಣಾಧಿಕಾರಿಯಾಗಿ ಮಾಡಿದಾಗಲು ಇರುತ್ತದೆ. ಸರ್ಕಾರದ ಅಧಿಕಾರಿಗಳಿಗೆ ಇಲಾಖಾ ವಿಚಾರಣೆ ನಡೆಸುವುದು ಒಂದು ಹೆಚ್ಚುವರಿ ಕರ್ತವ್ಯವಾಗಿರುತ್ತದೆ.

ಸರ್ಕಾರದ ಇಲಾಖಾ ವಿಚಾರಣೆಗಳಲ್ಲಿ ಸರ್ಕಾರಿ ಸೇವೆಯಲ್ಲಿರುವ ಅಧಿಕಾರಿಗಳನ್ನು ಮಂಡನಾಧಿಕಾರಿಗಳಾಗಿ ನೇಮಕಮಾಡಿದ ಪ್ರಸಂಗಗಳಲ್ಲಿ, ಅಂತಹವರಿಗೆ ಒಂದು ಸಿಟಿಂಗ್‌ಗೆ ರೂ.100/– (ಒಂದು ನೂರು ರೂಪಾಯಿ) ರಂತೆ ಸಂಭಾವನೆ ನೀಡಲಾಗುತ್ತಿದೆ. ಇಲಾಖಾ ವಿಚಾರಣಾಧಿಕಾರಿಗಳಾಗಿ ನೇಮಕವಾಗುವ ಸೇವೆಯಲ್ಲಿರುವ ಅಧಿಕಾರಿಗಳಿಗೆ ಯಾವುದೇ ಸಂಭಾವನೆ ನೀಡದಿರುವುದು ಸಮಂಜಸವಾಗುವುದಿಲ್ಲವೆಂಬುದನ್ನು ಸರ್ಕಾರ ಮನಗಾಣಲಾಗಿದೆ. ಅಲ್ಲದೆ ಯಾವುದೇ ಇಲಾಖಾ ವಿಚಾರಣೆಯಲ್ಲಿ ಸರ್ಕಾರದ ಸೇವೆಯಲ್ಲಿರುವ ಅಧಿಕಾರಿಗಳನ್ನು ವಿಚಾರಣಾಧಿಕಾರಿಯಾಗಿ ನೇಮಕ ಮಾಡಿದರೆ, ಅವರಿಗೆ ಪ್ರೋತ್ಸಾಹಧನ ಅಥವಾ ಸಂಭಾವನೆ ನೀಡುವುದು ಸೂಕ್ತವೆಂದು ಪರಿಭಾವಿಸಲಾಗಿದೆ. ಈ ವಿಷಯವನ್ನು ಅಂದರೆ, ಸರ್ಕಾರಿ ಸೇವೆಯಲ್ಲಿರುವ ಅಧಿಕಾರಿಗಳನ್ನು ವಿಚಾರಣಾಧಿಕಾರಿಗಳಾಗಿ ನೇಮಕಮಾಡಿದಾಗ ಅವರಿಗೆ ಸಂಭಾವನೆ ನೀಡುವ ಸಂಬಂಧವಾಗಿ ಸರ್ಕಾರ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ–

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 07 ಸೇಇವಿ 2012, ಬೆಂಗಳೂರು, ದಿನಾಂಕ : 03–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು, 1957ರಡಿ ಸರ್ಕಾರಿ ನೌಕರರ ವಿರುದ್ಧ ಜರುಗಿಸುವ ಇಲಾಖಾ ವಿಚಾರಣೆಗಳಲ್ಲಿ ಸರ್ಕಾರದ ಸೇವೆಯಲ್ಲಿರುವ ಅಧಿಕಾರಿಗಳನ್ನು

ವಿಚಾರಣಾಧಿಕಾರಿಗಳನ್ನಾಗಿ ನೇಮಕಮಾಡಿದಾಗ ಮತ್ತು ನಿಗಧಿಪಡಿಸಿರುವ ಅವಧಿಯಲ್ಲಿಯೇ ವಿಚಾರಣಾ ವರದಿಯನ್ನು ನೀಡುವ ಪ್ರಕರಣಗಳಲ್ಲಿ ಮಾತ್ರ ವಿಚಾರಣಾಧಿಕಾರಿಗಳಿಗೆ ಪ್ರೋತ್ಸಾಹಧನವಾಗಿ ಆಥವಾ ಸಂಭಾವನೆ ರೂಪದಲ್ಲಿ ರೂ. 5000/– (ಐದು ಸಾವಿರ ರೂಪಾಯಿಗಳು)ನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೀಡಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯು ದಿನಾಂಕ: 08–12–2011ರ ಟಿಪ್ಪಣಿ ಸಂಖ್ಯೆ: ಆಇ1691/ಸೇ–1/11 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ದೇವರಾಜು**
ಸರ್ಕಾರದ ಉಪ ಕಾರ್ಯದರ್ಶಿ
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು)

ಪಿ.ಆರ್. 524

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಡಾ: ಜೆ.ರವಿಶಂಕರ್, ಐ.ಎ.ಎಸ್., ಇವರ ದಿನಾಂಕ: 04–05–2011 ರಿಂದ 23–05–2011ರ ವರೆಗಿನ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 70 ಎಸ್‌ಹೆಚ್‌ಡಿ 2011, ದಿನಾಂಕ: 30–04–2011.
2. ಸರ್ಕಾರದ ಪತ್ರ ಸಂಖ್ಯೆ: ಅಆಸುಇ 98 ಎಸ್‌ಎಂಇ 2011, ದಿನಾಂಕ: 12–05–2011.
3. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 247 ಎಸ್‌ಎಎಸ್ 2011, ದಿನಾಂಕ: 13–05–2011.
4. ಡಾ: ಜೆ.ರವಿಶಂಕರ್, ಐ.ಎ.ಎಸ್., ಇವರ ಸರ್ಕಾರಿ ಪತ್ರ ಸಂಖ್ಯೆ: ಗ್ರಾಅಪ/ಕನೀಸ/37/2011, ದಿನಾಂಕ: 03–11–2011 ಮತ್ತು 26–12–2011.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 30–04–2011ರ ಅಧಿಸೂಚನೆಯಲ್ಲಿ ಡಾ: ಜೆ.ರವಿಶಂಕರ್, ಐ.ಎ.ಎಸ್., ಇವರನ್ನು ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತ, ಬೆಂಗಳೂರು ಹುದ್ದೆಯಿಂದ ವರ್ಗಾಯಿಸಿ ಆದೇಶಿಸಿದ್ದರ ಮೇರೆಗೆ ಸದರಿಯವರು ದಿನಾಂಕ: 04–05–2011ರ ಪೂರ್ವಾಹ್ನ ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಟ್ಟು, ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ಈ ಮಧ್ಯೆ ಶ್ರೀಯುತರನ್ನು ತಮಿಳುನಾಡು ರಾಜ್ಯದಲ್ಲಿ ಚುನಾವಣಾ ಪರಿವೀಕ್ಷಕರಾಗಿ ಕಾರ್ಯನಿರ್ವಹಿಸಲು ನೇಮಿಸಿದ್ದರ ಮೇರೆಗೆ ಅವರು ದಿನಾಂಕ: 09–05–2011ರಿಂದ 14–05–2011ರ ವರೆಗೆ ಚುನಾವಣಾ ಪರಿವೀಕ್ಷಕರಾಗಿ ಕಾರ್ಯನಿರ್ವಹಿಸಿರುತ್ತಾರೆ. ತದನಂತರ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 12–05–2011ರ ಸರ್ಕಾರಿ ಪತ್ರದಲ್ಲಿ ಡಾ: ಜೆ.ರವಿಶಂಕರ್, ಐ.ಎ.ಎಸ್., ಇವರಿಗೆ ದಿನಾಂಕ: 15–05–2011ರಿಂದ 23–05–2011ರ ವರೆಗೆ ಸಾಂದರ್ಭಿಕ ರಜೆ ಹಾಗೂ ಸಾರ್ವತ್ರಿಕ ರಜೆಗಳನ್ನು ಪಡೆದು ಮಲೇಷಿಯಾ ಮತ್ತು ಸಿಂಗಪುರ್‌ಗೆ ಖಾಸಗಿ ವಿದೇಶ ಪ್ರವಾಸ ಕೈಗೊಳ್ಳಲು ಸರ್ಕಾರದ ಅನುಮತಿ ನೀಡಲಾಗಿದೆ. ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ದಿನಾಂಕ: 13–05–2011ರ ಅಧಿಸೂಚನೆಯಲ್ಲಿ ನೇಮಕಾತಿ ನಿರೀಕ್ಷಣೆಯಲ್ಲಿದ್ದ ಸದರಿಯವರನ್ನು ನಿರ್ದೇಶಕರು, ಕರ್ನಾಟಕ ಗ್ರಾಮೀಣ ನೀರು ಸರಬರಾಜು ಮತ್ತು ನೈರ್ಮಲ್ಯ ಸಂಸ್ಥೆ ಮತ್ತು ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ, ಬೆಂಗಳೂರು ಹುದ್ದೆಗೆ ನೇಮಿಸಿದ್ದು, ಅದರಂತೆ ಸದರಿಯವರು ದಿನಾಂಕ: 24–05–2011ರ ಪೂರ್ವಾಹ್ನ ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ.

ಮೇಲೆ ಕ್ರ.ಸಂ. (4)ರಲ್ಲಿ ಓದಲಾದ ಪತ್ರದಲ್ಲಿ ಡಾ: ಜೆ.ರವಿಶಂಕರ್, ಐ.ಎ.ಎಸ್., ಇವರು ತಾವು ದಿನಾಂಕ: 04–05–2011 ರಿಂದ 23–05–2011ರ ವರೆಗಿನ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿದ್ದಾರೆ.

ಸರ್ಕಾರವು ಪ್ರಕರಣವನ್ನು ಪರಿಶೀಲಿಸಿದೆ. ಆದುದರಿಂದ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 203 ಎಸ್‌ಐಎಸ್ 2011, ಬೆಂಗಳೂರು, ದಿನಾಂಕ : 03ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಜೆ.ರವಿಶಂಕರ್, ಐ.ಎ.ಎಸ್., ಇವರು ದಿನಾಂಕ: 04–05–2011 ರಿಂದ 23–05–2011ರ ವರೆಗೆ ಕಳೆದ ಅವಧಿಯನ್ನು ಸರ್ಕಾರವು ಈ ಕೆಳಕಂಡಂತೆ ಪರಿಗಣಿಸಿ ಆದೇಶಿಸಿದೆ.

| | | | |
|---|---|---|---|
| i) | ದಿನಾಂಕ: 04–05–2011 ರಿಂದ 08–05–2011ರ ವರೆಗೆ | – | ಗಳಿಗೆ ರಜೆಯೆಂದು ಪರಿಗಣಿಸಿದೆ. |
| ii) | ದಿನಾಂಕ: 09–05–2011 ರಿಂದ 14–05–2011 ರ ವರೆಗೆ | – | ತಮಿಳುನಾಡು ರಾಜ್ಯದಲ್ಲಿ ಚುನಾವಣೆ ಕೆಲಸದ ಪ್ರಯುಕ್ತ ಕರ್ತವ್ಯದ ಅವಧಿ ಎಂದು ಪರಿಗಣಿಸಿದೆ. |
| iii) | ದಿನಾಂಕ: 16–05–2011 ರಿಂದ 23–05–2011 | – | ಈಗಾಗಲೇ ಅನುಮತಿ ನೀಡಿರುವಂತೆ ಸಾಂದರ್ಭಿಕ ರಜೆ/ಸಾರ್ವತ್ರಿಕ ರಜೆ ಪಡೆದು ವಿದೇಶ ಪ್ರವಾಸ ಕೈಗೊಂಡ ಅವಧಿಯೆಂದು ಪರಿಗಣಿಸಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಯು.ಹೆಚ್. ನಾರಾಯಣಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

ಪಿ.ಆರ್. 525

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಸಚಿವಾಲಯದಲ್ಲಿ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ನ್ಯಾಯಾಂಗ ಅಧಿಕಾರಿಗಳಿಗೆ ನಿಲುವಂಗಿ ಭತ್ಯೆ (Robe Allowance) ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಲಾ 147 ಎಲ್ಎಸಿ 2009, ದಿನಾಂಕ: 13–10–2010.

2. ಅಧಿಕಾರಿಯವರ ದಿನಾಂಕ: 26–04–2011ರ ಮನವಿ.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ನ್ಯಾಯಾಂಗ ಇಲಾಖೆಗೆ ಸೇರಿದ ಅಧಿಕಾರಿಗಳಿಗೆ (ಜ್ಯುಡಿಷಿಯಲ್ ಆಫೀಸರ್ಸ್)ಗೆ ಮೂರು (3) ವರ್ಷಗಳಿಗೊಮ್ಮೆ ರೂ. 6000/– ರಂತೆ ನಿಲುವಂಗಿ ಭತ್ಯೆಯನ್ನು (Robe Allowance) ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಶ್ರೀ ಕೆ.ಡಿ. ದೇಶಪಾಂಡೆ, ಸರ್ಕಾರದ ಅಪರ ಕಾರ್ಯದರ್ಶಿ ಪ್ರಸ್ತುತ ಗುತ್ತಿಗೆ ಆಧಾರದ ಮೇಲೆ ಸರ್ಕಾರದ ಅಪರ ಕಾರ್ಯದರ್ಶಿ (ಅಭಿಪ್ರಾಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ–ಇವರು 2009–11ನೇ ಬ್ಲಾಕ್ ಅವಧಿಗೆ ನಿಲುವಂಗಿ ಭತ್ಯೆಯನ್ನು ಮಂಜೂರು ಮಾಡಲು ಕೋರಿದ್ದಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 462 ಸಅಸೇ 2010, ಬೆಂಗಳೂರು, ದಿನಾಂಕ : 08ನೇ ಫೆಬ್ರವರಿ 2012**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ನಿಯೋಜನೆ ಮೇರೆಗೆ ಕಾರ್ಯನಿರ್ವಹಿಸುತ್ತಿರುವ ಶ್ರೀ ಕೆ.ಡಿ. ದೇಶಪಾಂಡೆ, ಸರ್ಕಾರದ ಅಪರ ಕಾರ್ಯದರ್ಶಿ ಪ್ರಸ್ತುತ ಗುತ್ತಿಗೆ ಆಧಾರದ ಮೇಲೆ ಸರ್ಕಾರದ ಅಪರ ಕಾರ್ಯದರ್ಶಿ (ಅಭಿಪ್ರಾಯ), ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ ಇವರಿಗೆ 2009–11ನೇ ಬ್ಲಾಕ್ ಅವಧಿಗೆ ರೂ. 6000/– (ರೂಪಾಯಿ ಆರು ಸಾವಿರಗಳು ಮಾತ್ರ) ಗಳ ನಿಲುವಂಗಿ ಭತ್ಯೆಯನ್ನು (Robe Allowance) ಮಂಜೂರು ಮಾಡಲಾಗಿದೆ.

ಈ ವೆಚ್ಚವನ್ನು ಸಚಿವಾಲಯಕ್ಕೆ ಸಂಬಂದಿಸಿದ Salary Head-Other Allowances ನಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 256 ಸೇ.2 2011, ದಿನಾಂಕ: 05–12–2011 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎ.ಆರ್. ವಿಜಯಾನಂದ ಶರ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–3)

ಪಿ.ಆರ್. 526

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಮಹಮದ್ ಗೌಸ್ ನಿವೃತ್ತ ಕೆಎಎಸ್ ಅಧಿಕಾರಿ ಇವರ ವಿರುದ್ಧದ ಇಲಾಖಾ ವಿಚಾರಣೆ–ಅಂತಿಮ ಆದೇಶ.

**ಓದಲಾಗಿದೆ :**

1. ನೋಟೀಸ್ ಸಂಖ್ಯೆ: ಸಿಆಸುಇ 120 ಎಸ್ಇಎನ್ 2003, ದಿನಾಂಕ: 27–04–2004.
2. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 120 ಎಸ್ಇಎನ್ 2003, ದಿನಾಂಕ: 29–10–2007.
3. ವಿಚಾರಣಾಧಿಕಾರಿಗಳು ಹಾಗೂ ಜಿಲ್ಲಾಧಿಕಾರಿಗಳು ಮೈಸೂರು ಇವರ ಪತ್ರ ಸಂಖ್ಯೆ: ಇಎಸ್‌ಟಿ (2) ಸಿಆರ್ 77 2010–11, ದಿನಾಂಕ: 22–03–2011
4. ಶ್ರೀ ಮಹಮದ್ ಗೌಸ್, ಕೆಎಎಸ್ ನಿವೃತ್ತ ಅಧಿಕಾರಿ ಇವರಿಗೆ ಜಾರಿಗೊಳಿಸಲಾಗಿರುವ 2ನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಸಿಆಸುಇ 163 ಕೆಇವಿ 2007, ದಿನಾಂಕ: 07–05–2011.
5. ಶ್ರೀ ಮಹಮದ್ ಗೌಸ್ ಇವರ ದಿನಾಂಕ: 16–05–2011 ಮತ್ತು 23–06–2011ರ ಪತ್ರಗಳು.
6. ಕಾರ್ಯದರ್ಶಿ, ಕರ್ನಾಟಕ ಲೋಕಸೇವಾ ಆಯೋಗ ಇವರ ಪತ್ರ ಸಂಖ್ಯೆ: ಪಿಎಸ್‌ಸಿ 139 ಸಿಎನ್ಎಸ್ 2011, ದಿನಾಂಕ: 01–12–2011.

**ಪ್ರಸ್ತಾವನೆ :**

ಶ್ರೀ ಮಹಮದ್ ಗೌಸ್ ಕೆ.ಎ.ಎಸ್. ಅಧಿಕಾರಿ ಇವರು ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರಾಗಿ ಕಾರ್ಯನಿರ್ವಹಿಸುತ್ತಿದ್ದ ಅವಧಿಯಲ್ಲಿ ಚಾಮರಾಜನಗರ ತಾಲ್ಲೂಕು ಕಛೇರಿ ನೌಕರರಾದ ಶ್ರೀ ವೆಂಕಟಸ್ವಾಮಿ ಇವರ ಮೂಲಕ ಕಂದಾಯ ಇಲಾಖೆಯ 15 ಮಂದಿ ನೌಕರರಿಂದ ನಿವೇಶನ ನೀಡುವ ಆಶ್ವಾಸನೆಯೊಂದಿಗೆ ಸುಮಾರು ರೂ. 1,52,800/– ಗಳನ್ನು ಸಂಗ್ರಹಿಸಿ ಸ್ಟೇಟ್ ಬ್ಯಾಂಕ್ ಆಫ್ ಇಂಡಿಯಾ ಉಳಿತಾಯ ಖಾತೆಗೆ ಜಮೆ ಮಾಡಿಸಿ ನಿವೇಶನಗಳನ್ನು ಹಂಚದೆ ಸಂಗ್ರಹಿಸಿದ್ದ ಮೊಬಲಗನ್ನು ಖಾಸಗಿ ವ್ಯವಹಾರಕ್ಕೆ ಬಳಸಿ ನೌಕರರನ್ನು ವಂಚಿಸಿದ ಆರೋಪಗಳಿಗಾಗಿ ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ನೋಟೀಸ್‌ನೊಂದಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಿ ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ಸದರಿ ನೋಟೀಸಿಗೆ ಆಪಾದಿತ ಅಧಿಕಾರಿಯು ನೀಡಿದ್ದ ವಿವರಣೆಯು ಸಮರ್ಪಕವಾಗಿಲ್ಲದ ಕಾರಣ ಇವರ ವಿರುದ್ಧದ ಆರೋಪಗಳಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಆದೇಶದಲ್ಲಿ ಜಿಲ್ಲಾಧಿಕಾರಿಗಳು, ಮೈಸೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ಪತ್ರದೊಂದಿಗೆ ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿ ಆಪಾದಿತರು ಒಬ್ಬ ಹಿರಿಯ ಅಧಿಕಾರಿಯಾಗಿ ಕೆಲಸ ನಿರ್ವಹಿಸುತವಾಗ ಸರ್ಕಾರದ ಅನುಮತಿ ಪಡೆಯದೆ ನಿವೇಶನ ಹಂಚಿಕೆ ಕುರಿತು ಜಂಟಿ ಖಾತೆ ಹೊಂದಿರುವುದು ಕಾನೂನು ಬಾಹಿರವಾದ ಕ್ರಮವಾಗಿದ್ದು, ಸದರಿ ಖಾತೆಗೆ ಜಮೆ ಮಾಡಿರುವ ಹಣ ದುರುಪಯೋಗಕ್ಕೆ ಜವಾಬ್ದಾರರಾಗಿರುತ್ತಾರೆಂದು ತಿಳಿಸಿರುತ್ತಾರೆ. ಮುಂದುವರೆಯುತ್ತಾ, ಆಪಾದಿತರು ನಿವೇಶನ ಹಂಚಿಕೆ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗಿಯಾಗಿದ್ದು, ಹಣ ದುರುಪಯೋಗ ಮಾಡಿರುತ್ತಾರೆಂಬ ಬಗ್ಗೆ

ಸಾಕ್ಷಿದಾರರು ಸಾಕ್ಷ್ಯ ನುಡಿದಿದ್ದು, ಈ ಆಪಾದನೆಯನ್ನು ಅಲ್ಲಗೆಳೆಯಲು ಯಾವುದೇ ಪೂರಕ ದಾಖಲೆ ಒದಗಿಸದ ಕಾರಣ ಆಪಾದಿತರ ಮೇಲಿನ ಆರೋಪವು ಸಾಬೀತಾಗಿರುವುದಾಗಿ ಅಭಿಪ್ರಾಯಪಟ್ಟಿರುತ್ತಾರೆ.

ಈ ವಿಚಾರಣಾ ವರದಿಯನ್ನು ಅಂಗೀಕರಿಸಿ ಸೂಕ್ತ ದಂಡನೆಯನ್ನು ವಿಧಿಸುವ ಮೊದಲು ಆಪಾದಿತರಿಗೆ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾಗಿರುವಂತೆ 2ನೇ ಕಾರಣ ಕೇಳುವ ನೊಟೀಸನ್ನು ಜಾರಿಗೊಳಿಸಿ ಅವರ ಸಮಜಾಯಿಷಿಯನ್ನು ಕೋರಲಾಗಿತ್ತು. ಆಪಾದಿತರು ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರಗಳಲ್ಲಿ ಸರ್ಕಾರದಿಂದ ಜಾರಿಗೊಳಿಸಲಾದ ನೊಟೀಸಿಗೆ ಉತ್ತರಿಸಲು ಕಾಲಾವಕಾಶವನ್ನು ನೀಡುವಂತೆ ಕೋರಿದ ಮೇರೆಗೆ ಆಪಾದಿತರ ಮನವಿಯನ್ನು ಪರಿಗಣಿಸಿ ಆಪಾದಿತರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಸಹ ಅವರು ನಿಗಧಿತ ಅವಧಿಯೊಳಗೆ ತಮ್ಮ ವಿವರಣೆಯನ್ನು ಸಲ್ಲಿಸುವಲ್ಲಿ ವಿಫಲಗೊಂಡಿರುತ್ತಾರೆ. ಆದ್ದರಿಂದ, ಆಪಾದಿತರು ಸರ್ಕಾರದಿಂದ ಜಾರಿಗೊಳಿಸಲಾದ 2ನೇ ಕಾರಣ ಕೇಳುವ ನೊಟೀಸಿಗೆ ತಮ್ಮ ಲಿಖಿತ ಹೇಳಿಕೆಯನ್ನು ಸಲ್ಲಿಸದ ಕಾರಣ ವಿಚಾರಣಾ ವರದಿಯನ್ನು ಅಂಗೀಕರಿಸಿ ಇವರಿಗೆ ಸೂಕ್ತ ದಂಡನೆ ವಿಧಿಸಲು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಅದರಂತೆ ಕರ್ನಾಟಕ ಲೋಕಸೇವಾ ಆಯೋಗವು ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ಪತ್ರದಲ್ಲಿ ಆಪಾದಿತರಿಗೆ ದಂಡನೆ ವಿಧಿಸುವ ಸರ್ಕಾರದ ಪ್ರಸ್ತಾವನೆಗೆ ಸಹಮತಿಯನ್ನು ನೀಡಿರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 163 ಕೆಇವಿ 2007, ಬೆಂಗಳೂರು, ದಿನಾಂಕ : 31ನೇ ಜನವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸಂದರ್ಭಗಳ ಹಿನ್ನೆಲೆಯಲ್ಲಿ ಸರ್ಕಾರವು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ರ ನಿಯಮ 214 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಈ ಹಿಂದೆ ಚಾಮರಾಜನಗರ ಜಿಲ್ಲಾಧಿಕಾರಿಗಳ ಕೇಂದ್ರ ಸ್ಥಾನಿಕ ಸಹಾಯಕರಾಗಿ ಕಾರ್ಯನಿರ್ವಹಿಸಿದ್ದ ಶ್ರೀ ಮಹಮದ್ ಗೌಸ್, ನಿವೃತ್ತ ಕೆಎಎಸ್ (ಕಿ.ಶ್ರೇ) ಅಧಿಕಾರಿ ಇವರ ವಿರುದ್ಧ ಮಾಡಲಾದ ಆರೋಪಗಳು ಸಾಬೀತಾಗಿರುವುದರಿಂದ ಇವರ ನಿವೃತ್ತಿ ವೇತನದಿಂದ ಮಾಸಿಕ ರೂ. 500/– ಗಳನ್ನು (ರೂ. ಐದುನೂರು ಮಾತ್ರ) ಮುಂದಿನ ಐದು ವರ್ಷಗಳ ಅವಧಿಗೆ ಕಡಿತಗೊಳಿಸುವ ದಂಡನೆ ವಿಧಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ವಡಗಾವೆ ಬಸವರಾಜ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–2)

ಪಿ.ಆರ್. 527

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಪಿ.ಬಿ. ರಾಮಮೂರ್ತಿ, ಐ.ಎ.ಎಸ್., ಇವರ ಕಡ್ಡಾಯ ನಿರೀಕ್ಷಣಾ ಅವಧಿಯನ್ನು ಸಕ್ರಮಗೊಳಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 660 ಎಸ್ಎಎಸ್ 2011, ದಿನಾಂಕ: 31–12–2011.
2. ಸರ್ಕಾರದ ಅಧಿಸೂಚನೆ ಸಂಖ್ಯೆ: ಸಿಆಸುಇ 74 ಎಸ್ಎಎಸ್ 2012, ದಿನಾಂಕ: 25–01–2012.
3. ಶ್ರೀ ಪಿ.ಬಿ. ರಾಮಮೂರ್ತಿ, ಐ.ಎ.ಎಸ್., ಇವರ ಟಿಪ್ಪಣಿ ಸಂಖ್ಯೆ: ಸಾರಿಇ 351 ಪ್ರಕಾ 2012, ದಿನಾಂಕ: 03–02–2012.

**ಪ್ರಸ್ತಾವನೆ :**

ಮೇಲೆ ಕ್ರ.ಸಂ. (1)ರಲ್ಲಿ ಓದಲಾದ ದಿನಾಂಕ: 31–12–2011ರ ಅಧಿಸೂಚನೆಯಲ್ಲಿ ಶ್ರೀ ಪಿ.ಬಿ. ರಾಮಮೂರ್ತಿ, ಐ.ಎ.ಎಸ್., ಇವರನ್ನು ಅಧ್ಯಕ್ಷರು, ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ, ಬೆಂಗಳೂರು ಹುದ್ದೆಯಿಂದ ವರ್ಗಾಯಿಸಿ ಆದೇಶಿಸಿದ್ದರ ಮೇರೆಗೆ ಸದರಿಯವರು ದಿನಾಂಕ: 04–01–2012ರ ಪೂರ್ವಾಹ್ನ ಸದರಿ ಹುದ್ದೆಯ ಕಾರ್ಯಭಾರವನ್ನು ವಹಿಸಿಕೊಟ್ಟು, ದಿನಾಂಕ: 04–01–2012ರ ಅಪರಾಹ್ನ ಸಿಆಸು ಇಲಾಖೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡು ನೇಮಕಾತಿ ನಿರೀಕ್ಷಣೆಯಲ್ಲಿದ್ದರು. ತದನಂತರ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 25–01–2012ರ ಅಧಿಸೂಚನೆಯಲ್ಲಿ ಶ್ರೀಯುತರನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಾರಿಗೆ ಇಲಾಖೆ ಹುದ್ದೆಗೆ ನೇಮಿಸಿದ್ದು, ಅದರಂತೆ ಸದರಿಯವರು ದಿನಾಂಕ: 27–01–2012ರ ಪೂರ್ವಾಹ್ನ ಸದರಿ ಹುದ್ದೆಯಲ್ಲಿ ಕರ್ತವ್ಯಕ್ಕೆ ವರದಿ ಮಾಡಿಕೊಂಡಿರುತ್ತಾರೆ. ಮೇಲೆ ಕ್ರ.ಸಂ. (3)ರಲ್ಲಿ ಓದಲಾದ ಪತ್ರದಲ್ಲಿ ಶ್ರೀ ಪಿ.ಬಿ. ರಾಮಮೂರ್ತಿ, ಐ.ಎ.ಎಸ್., ಇವರು ತಾವು ದಿನಾಂಕ: 04–01–2012ರಿಂದ 26–01–2012ರ ವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸಕ್ರಮಗೊಳಿಸುವ ನಿಟ್ಟಿನಲ್ಲಿ ಸೂಕ್ತ ಆದೇಶ ಹೊರಡಿಸಲು ಕೋರಿದ್ದಾರೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 25 ಎಸ್ಐಎಸ್ 2012, ಬೆಂಗಳೂರು, ದಿನಾಂಕ : 08ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಪಿ.ಬಿ. ರಾಮಮೂರ್ತಿ, ಐ.ಎ.ಎಸ್., ಇವರು ದಿನಾಂಕ: 04–01–2012 ರಿಂದ 26–01–2012ರ ವರೆಗೆ ನೇಮಕಾತಿ ನಿರೀಕ್ಷಣೆಯಲ್ಲಿ ಕಳೆದ ಅವಧಿಯನ್ನು ಸರ್ಕಾರವು ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ನಿಯಮ 8(15)(ಎಫ್)ರ ಮೇರೆಗೆ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿ ಸಕ್ರಮಗೊಳಿಸಿದೆ.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/1/ಟಿಎಫ್‌ಪಿ/96, ದಿನಾಂಕ: 10–07–96ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ನೀಡಲಾದ ವಿತ್ತಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಹೆಚ್. ನಾರಾಯಣಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು–1)

ಪಿ.ಆರ್. 528

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

### ಸುತ್ತೋಲೆ

**ಸಂಖ್ಯೆ : ಸಿಆಸುಇ 73 ಇಆಇ 2011 (ಭಾಗ–1)(1), ಬೆಂಗಳೂರು, ದಿನಾಂಕ: 01ನೇ ಫೆಬ್ರವರಿ 2012.**

**ವಿಷಯ :** ಸರ್ಕಾರದ ಅಧಿಕಾರಿ/ಸಿಬ್ಬಂದಿಗಳಿಗೆ Karnataka.gov.in.domain ನಲ್ಲಿ ಇ–ಮೇಲ್ ಖಾತೆಗಳನ್ನು ನೀಡುವುದರ ಬಗ್ಗೆ.

ಸಿಬ್ಬಂದಿ ಮತ್ತು ಆಡಳಿತ ಸುದಾರಣೆ ಇಲಾಖೆ (ಇ–ಆಡಳಿತ)ಯು ಸರ್ಕಾರದ ಅಧಿಕಾರಿ/ಸಿಬ್ಬಂದಿಗಳಿಗೆ ಇ–ಮೇಲ್ ಖಾತೆಗಳನ್ನು Karnataka.gov.in.domain ನಲ್ಲಿ ನೀಡಿದೆ. ಇಲ್ಲಿ ಸೃಜಿಸಿರುವ ಬಳಕೆದಾರರ ಖಾತೆಗಳನ್ನು ಪರಿಶೀಲಿಸಲಾಗಿ ಸುಮಾರು 2 ವರ್ಷಗಳಿಂದ ಹಲವಾರು ಖಾತೆಗಳನ್ನು ಬಳಸದೇ ಇರುವುದು ಗಮನಿಸಲಾಗಿದೆ. ವಿವಿಧ ಇಲಾಖೆಗಳಿಂದ ಹೊಸ ಇ–ಮೇಲ್ ಖಾತೆಗಳನ್ನು ಸೃಷ್ಠಿಸಲು ಕೋರಿಕೆಗಳು ಕೂಡ ಬಂದಿರುತ್ತವೆ.

**2.** ಈ ಸಂಬಂಧ ಸಮಗ್ರವಾದ ಮಾರ್ಗಸೂಚಿಗಳನ್ನು ಅನುಸರಿಸುವುದು ಅಗತ್ಯವೆಂದು ಭಾವಿಸಲಾಗಿದೆ. ಅದರಂತೆ, ಈ ಕೆಳಕಂಡ ಮಾರ್ಗಸೂಚಿಗಳನ್ನು ಈ ಮೂಲಕ ನಿಗಧಿಪಡಿಸಲಾಗಿದೆ:–

(ಅ) ಇ–ಮೇಲ್ ಖಾತೆಯನ್ನು 6 ತಿಂಗಳಿಗಿಂತ ಹೆಚ್ಚಿನ ಅವಧಿಯವರೆಗೂ ಬಳಸದಿದ್ದಲ್ಲಿ ಇಂತಹ ಖಾತೆಗಳನ್ನು ತಕ್ಷಣ ಕೈಬಿಡಲಾಗುವುದು (Delete ಮಾಡಲಾಗುವುದು).

(ಆ) **ಯಾವುದೇ** ಇ–ಮೇಲ್ ಖಾತೆಗಳ ಅಗತ್ಯತೆ ಇದ್ದಲ್ಲಿ, ಸಂಬಂಧಿಸಿದ ಅಧಿಕಾರಿ/ಸಿಬ್ಬಂದಿಗಳ ಸಂಪೂರ್ಣ ವಿವರಗಳನ್ನು ಈ ಸುತ್ತೋಲೆಗೆ ಲಗತ್ತಿಸಿದ ನಮೂನೆಯಲ್ಲಿ ಭರ್ತಿ ಮಾಡತಕ್ಕದ್ದು.

(ಇ) ಇ–ಮೇಲ್ ಖಾತೆಯನ್ನು ತೆಗೆಯುವ ಪ್ರಸ್ತಾವನೆಗೆ ಸಂಬಂಧಪಟ್ಟ ಆಡಳಿತ ಇಲಾಖೆಯ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರ ಅನುಮೋದನೆ ಅಗತ್ಯವಿರುತ್ತದೆ. ಅದಕ್ಕಾಗಿ ಅವರ ಸಹಿಯನ್ನು ಈ ಸುತ್ತೋಲೆಗೆ ಲಗತ್ತಿಸಿದ ಸದರಿ ನಮೂನೆಯಲ್ಲಿ ಪಡೆದು ಅದನ್ನು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ), ಇವರಿಗೆ ಸಲ್ಲಿಸತಕ್ಕದ್ದು. ಈ ಇ–ಮೇಲ್ ಖಾತೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)ರ ವತಿಯಿಂದ ಸೃಜಿಸಲಾಗುವುದು.

**3.** ಈ ಸುತ್ತೋಲೆಯಲ್ಲಿ ಒಳಗೊಂಡ ಮಾರ್ಗಸೂಚಿಗಳನ್ನು ಕರ್ನಾಟಕ ಸರ್ಕಾರ ಸಚಿವಾಲಯದ ಆಯಾಯ ಇಲಾಖೆಯ ಎಲ್ಲಾ ಅಧಿಕಾರಿ/ಸಿಬ್ಬಂದಿಗಳ ಗಮನಕ್ಕೆ ತರಲು ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ/ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರನ್ನು ಈ ಮೂಲಕ ಕೋರಲಾಗಿದೆ.

**ಎಂ.ಎನ್. ವಿದ್ಯಾಶಂಕರ್**
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಇ–ಆಡಳಿತ)

ಪಿ.ಆರ್. 529

### ಸರ್ಕಾರದ ಅಧಿಕಾರಿಗಳಿಗೆ/ಸಿಬ್ಬಂದಿಗಳಿಗೆ Karnataka.gov.in. domain ನಲ್ಲಿ ಇ–ಮೇಲ್ ಖಾತೆಗಳನ್ನು ನೀಡಲು ಅರ್ಜಿ ಸಲ್ಲಿಸುವ ನಮೂನೆ

ಇ–ಮೇಲ್ ಖಾತೆಯ ವಿವರ: ದಿನಾಂಕ:

| | |
|---|---|
| First Name | |
| Display Name | |
| Department | |
| Email ID Login (Designation Based) | |

**ಬಳಕೆದಾರರ ವಿವರಗಳು**

ಹೆಸರು :–

ಪದನಾಮ :–

ಇಲಾಖೆ :–

ವಿಳಾಸ :–

ದೂರವಾಣಿ ಸಂಪರ್ಕ :–

ಬಳಕೆದಾರರ ಸಹಿ

**ಇಲಾಖೆಯ ಅನುಮೋದನೆ**

ಮೇಲ್ಕಂಡ ಅಧಿಕಾರಿ/ಸಿಬ್ಬಂದಿಗೆ Karnataka.gov.in. domain ನಲ್ಲಿ ಇ–ಮೇಲ್ ಖಾತೆಯನ್ನು ನೀಡಬಹುದಾಗಿದೆ.

(ಸರ್ಕಾರದ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಯವರ
ಸಹಿ ಮತ್ತು ಮೊಹರು)

## ಇಂಧನ ಸಚಿವಾಲಯ

**ವಿಷಯ :** ರಾಜ್ಯದಲ್ಲಿರುವ ಅನಧಿಕೃತ ನೀರಾವರಿ ಪಂಪ್ ಸೆಟ್‌ಗಳ ಸಕ್ರಮೀಕರಣಕ್ಕಾಗಿ ನೋಂದಣಿ ದಿನಾಂಕವನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 9 ಪಿಎಸ್‌ಆರ್ 2011 ದಿನಾಂಕ: 11–03–2011.
2. ಸುತ್ತೋಲೆ ಸಂಖ್ಯೆ: ಇಎನ್ 9 ಪಿಎಸ್‌ಆರ್ 2011 ದಿನಾಂಕ: 27–04–2011.
3. ಸುತ್ತೋಲೆ ಸಂಖ್ಯೆ: ಇಎನ್ 9 ಪಿಎಸ್‌ಆರ್ 2006 ದಿನಾಂಕ: 30–06–2011.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 9 ಪಿಎಸ್‌ಆರ್ 2011 ದಿನಾಂಕ: 23–12–2011.

**ಪ್ರಸ್ತಾವನೆ :**

1) ಅಕ್ರಮ ನೀರಾವರಿ ಪಂಪ್ ಸೆಟ್‌ಗಳ ಸಕ್ರಮೀಕರಣಕ್ಕೆ ಅರ್ಜಿಗಳನ್ನು ನೋಂದಾಯಿಸಲು ದಿನಾಂಕ: 31–01–2012ರ ವರೆಗೆ ವಿಸ್ತರಿಸಿ, ಗಡುವು ನೀಡಲಾಗಿತ್ತು.

2) ದಿನಾಂಕ: 02–02–2012ರಂದು ನಡೆದ ವಿಧಾನ ಸಭೆಯ ಕಲಾಪದಲ್ಲಿ ಸದರಿ ವಿಷಯಕ್ಕೆ ಸಂಬಂಧಿಸಿದ ಪ್ರಶ್ನೋತ್ತರ ಚರ್ಚೆಯಲ್ಲಿ, ಮಾನ್ಯ ಶಾಸಕರುಗಳು ನೋಂದಾವಣಿ ದಿನಾಂಕವನ್ನು ಮತ್ತೊಮ್ಮೆ ವಿಸ್ತರಿಸುವಂತೆ ಮಾನ್ಯ ಇಂಧನ ಸಚಿವರನ್ನು ಕೋರಿರುತ್ತಾರೆ.

3) ಮಾನ್ಯ ಶಾಸಕರುಗಳ ಕೋರಿಕೆ ಮೇರೆಗೆ ಮಾನ್ಯ ಇಂಧನ ಸಚಿವರು ವಿಧಾನ ಸಭೆಯಲ್ಲಿ ಹೇಳಿಕೆಯನ್ನು ನೀಡಿ, ಅಕ್ರಮ ಪಂಪ್ ಸೆಟ್‌ಗಳ ಸಕ್ರಮೀಕರಣದ ನೋಂದಣಿ ದಿನಾಂಕವನ್ನು 31–03–2012ರ ವರೆಗೆ ವಿಸ್ತರಿಸುವುದಾಗಿ ತಿಳಿಸಿರುತ್ತಾರೆ.

ಅದರಂತೆ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 09 ಪಿಎಸ್‌ಆರ್ 2011, ಬೆಂಗಳೂರು, ದಿನಾಂಕ : 07ನೇ ಫೆಬ್ರವರಿ 2012**

ರಾಜ್ಯದ ಎಲ್ಲಾ ವಿದ್ಯುತ್ ವಿತರಣಾ ಕಂಪನಿಗಳ ವ್ಯಾಪ್ತಿಯಲ್ಲಿ ಬರುವ ಅಕ್ರಮ ನೀರಾವರಿ ಪಂಪ್‌ಸೆಟ್‌ಗಳನ್ನು ಸಕ್ರಮಗೊಳಿಸಲು ರೈತರು ತಮ್ಮ ಅರ್ಜಿಗಳನ್ನು ನೊಂದಾಯಿಸಲು ಕಾಲಾವಧಿಯನ್ನು ದಿನಾಂಕ: 31–03–2012 ರ ವರೆಗೆ ವಿಸ್ತರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್ ಬಿ. ಕೃಷ್ಣಪ್ಪನವರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 530 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಂಚಿಕೆಯಾಗಿರುವ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯವನ್ನು ಮೆ: ಗೈಲ್ (ಇಂಡಿಯಾ) ಲಿಮಿಟೆಡ್, ರವರಿಗೆ ವರ್ಗಾವಣೆ ಮಾಡುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 204 ಎನ್‌ಸಿಇ 2009 ದಿನಾಂಕ:: 20–05–2010
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 100 ಎನ್‌ಸಿಇ 2011 ದಿನಾಂಕ:: 06–04–2011
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ KRED/08/GAIL-2.1 MW (SD-29)SISL/2012, 186 ದಿನಾಂಕ: 12/19–01–2012

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಸರ್ಕಾರಿ ಆದೇಶದಲ್ಲಿ ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ರವರಿಗೆ ರಾಯಚೂರು, ಬಳ್ಳಾರಿ, ಬಿಜಾಪುರ, ಗುಲ್ಬರ್ಗಾ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಒಟ್ಟು 250.2 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಕೆಲವು ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿತ್ತು.

ಮೇಲಿನ ಆದೇಶದಲ್ಲಿ ಹಂಚಿಕೆಮಾಡಲಾಗಿರುವ ಒಟ್ಟು ಸಾಮರ್ಥ್ಯದಲ್ಲಿ ಹಾವೇರಿ ಜಿಲ್ಲೆಯ ಅಗಸನಹಳ್ಳಿ, ನಂದಿಹಳ್ಳಿ ಗ್ರಾಮದಲ್ಲಿ ಹಂಚಿಕೆಯಾಗಿದ್ದ ಅಂಶಿಕ ಸಾಮರ್ಥ್ಯವಾದ 3.00 ಮೆಗಾ ವ್ಯಾಟ್ ಸಾಮರ್ಥ್ಯವನ್ನು 16.8 ಮೆಗಾ ವ್ಯಾಟ್‌ಗೆ ಸಾಮರ್ಥ್ಯಕ್ಕೆ ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಸರ್ಕಾರಿ ಆದೇಶದಲ್ಲಿ ಹೆಚ್ಚಿಸಲಾಗಿತ್ತು.

ಮೇಲೆ ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯಲ್ಲಿ ಹೆಚ್ಚಿಸಿ ಅನುಷ್ಠಾನ ಮಾಡಲು ಅನುಮತಿಸಿರುವ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು ಮೆ: ಗೈಲ್ (ಇಂಡಿಯಾ) ಲಿಮಿಟೆಡ್ ಕಂಪನಿಗೆ ವರ್ಗಾಯಿಸುವಂತೆ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಸದರಿ ಯೋಜನೆಗೆ ಅವಶ್ಯಕವಾದ ಜಮೀನು ಕಂದಾಯ ಜಮೀನಾಗಿದ್ದು. ಈ ಯೋಜನೆಯನ್ನು 31–03–2012 ರೊಳಗೆ ಅನುಷ್ಠಾನಗೊಳಿಸಲಾಗುವುದೆಂದು ಹಾಗೂ ಉತ್ಪಾದನೆ ಆಗುವ ವಿದ್ಯುತ್ತನ್ನು ವಿದ್ಯುತ್ ಖರೀದಿ ಒಪ್ಪಂದದ ಮೂಲಕ ಎಸ್ಕಾಂಗೆ ಸರಬರಾಜು ಮಾಡಲಾಗುವುದೆಂದು ತಿಳಿಸಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 30 ಎನ್‌ಸಿಇ 2011 ಬೆಂಗಳೂರು, ದಿನಾಂಕ : 02ನೇ ಫೆಬ್ರವರಿ 2012**

ಮೆ: ಸುಜ್ಲಾನ್ ಇನ್‌ಫ್ರಾಸ್ಟ್ರಕ್ಚರ್ ಸರ್ವೀಸಸ್ ಲಿಮಿಟೆಡ್ ಕಂಪನಿಯವರಿಗೆ ಹಾವೇರಿ ಜಿಲ್ಲೆಯ ಅಗಸನಹಳ್ಳಿ, ನಾಂದಿಹಳ್ಳಿ ಮತ್ತು ಬ್ಯಾಡಗಿ ಗ್ರಾಮಗಳಲ್ಲಿ ಅನುಮತಿಸಲಾದ 16.8 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಿಂದ 2.1 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್

ಯೋಜನೆಯನ್ನು ಮೆ: ಗೈಲ್ (ಇಂಡಿಯಾ) ಲಿಮಿಟೆಡ್ ಕಂಪನಿಯವರಿಗೆ ಈ ಕೆಳಗಿನ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ ಕೆಳಕಂಡ ಷರತ್ತಿಗೊಳಪಟ್ಟು ವರ್ಗಾಯಿಸಲು ಅನುಮೋದನೆ ನೀಡಲಾಗಿದೆ:–

**Land Details of the Project**

| Village Name | Taluk/ District | MW | Land Survey Number | No. of WTGS | Extent in Land (Acres) | WTG Number | Latitude, Langitude and Ridge Peaks |
|---|---|---|---|---|---|---|---|
| Angaragatti | Byadagi/ Haveri | 2.1 | 58 | 1 No. | 2 Acres per WTG | SD-29 | The proposed area consists of independent NW-SE, oriented ridges located on South and southeast of Byadagi village, ridges having peaks and are held in the following geographical co-ordinates:<br><br>Latitude: $14^0$38'3'' – $14^0$40'0''N<br>Longifude: $75^0$25'0'' – $75^0$30'15''-E<br>Ridge peaks : 684, 670, 664, 696, 666, 661 & 698m Amsl.<br><br>Toposheet No: 48 N/6 & N/10<br>Loc No: SD 29<br>Lal: $14^0$39'14.4'' N<br>Long: $75^0$27'57.9'' E<br>Ridge peaks: 657 m |

1. **ಮೆ: ಗೈಲ್ (ಇಂಡಿಯಾ) ಲಿಮಿಟೆಡ್** ರವರು 45 ದಿನಗಳ ಒಳಗಾಗಿ ಸರ್ಕಾರಿ ಆದೇಶ ಸಂಖ್ಯೆ ಇಎನ್ 435 ಎನ್‌ಸಿಇ 06–01–2012 ರನ್ವಯ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದೊಂದಿಗೆ ನಿಯಮಾನುಸಾರ ಒಡಂಬಡಿಕೆ ಮಾಡಿಕೊಳ್ಳತಕ್ಕದ್ದು.
2. **ಮೆ: ಗೈಲ್ (ಇಂಡಿಯಾ) ಲಿಮಿಟೆಡ್** ರವರು ವಿದ್ಯುತ್ ಖರೀದಿ ಒಪ್ಪಂದವನ್ನು ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತ, ಹುಬ್ಬಳ್ಳಿ ಇವರೊಂದಿಗೆ ಮಾಡಿಕೊಳ್ಳತಕ್ಕದ್ದು.
3. ಸದರಿ ಯೋಜನೆಯನ್ನು ದಿನಾಂಕ **31–03–2012** ರೊಳಗಾಗಿ ಅನುಷ್ಠಾನಗೊಳಿಸತಕ್ಕದ್ದು, ಈ ಕುರಿತಂತೆ ಅಭಿವೃದ್ಧಿದಾರರಿಂದ ಕ್ರೆಡಲ್ ಒಪ್ಪಿಗೆ ಪತ್ರ ಪಡೆಯತಕ್ಕದ್ದು (committment letter)
4. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗೆ ಮುಂದುವರೆಯುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಸುರೇಶ್ ಬಿ. ಕೃಷ್ಣಪ್ಪನವರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

ಪಿ.ಆರ್. 531

## ಇಂಧನ ಸಚಿವಾಲಯ

**ವಿಷಯ :** **ಮೆ॥** Fortune five Hydel Projects (P) Limited ರವರ 32 ಮೆ.ವ್ಯಾ ಪವನ ವಿದ್ಯುತ್ ಸಾಮರ್ಥ್ಯವನ್ನು 128 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 316 ಎನ್‌ಸಿಇ 2006 ದಿನಾಂಕ : 16–10–2006.
2. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿಎಲ್/08/FFHPPL-(32MW to 128 MW)/2011/1585 ದಿನಾಂಕ : 28–05/03/04–06–2011.

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಮೆ॥ Fortune five Hydel Projects (P) Limited ರವರಿಗೆ ಬಿಜಾಪುರ ಜಿಲ್ಲೆಯಲ್ಲಿ 62.00 ಮೆ.ವ್ಯಾ. ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿತ್ತು.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಪತ್ರದಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತ ರವರು ಮೆ॥ Fortune five Hydel Projects (P) Limited ರವರಿಗೆ ಬಿಜಾಪುರ ಜಿಲ್ಲೆಯಲ್ಲಿ ಮಂಜೂರಾಗಿರುವ ಒಟ್ಟು 62.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯಲ್ಲಿ ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ 35.00 ಮೆ.ವ್ಯಾ. ಯೋಜನೆಯಿದ್ದು, ಇದರಲ್ಲಿ 32.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು 128.00 ಮೆ.ವ್ಯಾ.ಗೆ ಹೆಚ್ಚಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ : ಇಎನ್ 253 ಎನ್‌ಸಿಇ 2011, ಬೆಂಗಳೂರು, ದಿನಾಂಕ : 02ನೇ ಜನವರಿ 2012**

ಮೆ॥ Fortune five Hydel Projects (P) Limited ರವರಿಗೆ ಮಂಜೂರಾಗಿರುವ 62.00 ಮೆ.ವ್ಯಾ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬಿಜಾಪುರ ಜಿಲ್ಲೆಯ ಇಂಗಳೇಶ್ವರ, ರಾಬಿನಹಾಳ್, ರಾಮನಹಟ್ಟಿ, ಹಂಚಿನಾಳ್, ಸಾಲವಡಗಿ, ಬೂದಿಹಾಳ್ ಗ್ರಾಮಗಳಲ್ಲಿ 35.00 ಮೆ.ವ್ಯಾ. ಯೋಜನೆಯಿದ್ದು, ಇದರಲ್ಲಿ 32.00 ಮೆ.ವ್ಯಾ. ಸಾಮರ್ಥ್ಯದ ಯೋಜನೆಯನ್ನು 128.00 ಮೆ.ವ್ಯಾ.ಗೆ ಈ ಕೆಳಕಂಡ ಶೆಡ್ಯೂಲ್‌ನಲ್ಲಿ ವಿವರಿಸಿರುವಂತೆ ಹಾಗೂ 100 ಮೆ.ವ್ಯಾ. ಪವನ ವಿದ್ಯುತ್ ಸಾಮರ್ಥ್ಯವನ್ನು ಪಿಪಿಎ ಮಾಡಿಕೊಳ್ಳುವ ಷರತ್ತಿಗೊಳಪಟ್ಟು ಹೆಚ್ಚಿಸಲಾಗಿದೆ :–

| Geographical Area Details of the Project | Sanctioned capacity in MW | Enhancement Proposed in MW in Stage-1 | No. of WTGs & rating in KW | Total capacity including proposed enhancement in MW |
|---|---|---|---|---|
| A proposed area has a gentle elevation and is spread across the villages as mentioned under column 4. And it appears to be an agriculture land. The average elevation of the site is about 650m and the area is held in the following Geographical co-oridinates :-<br>Latitude : $16^0$30'0"- $16^0$41'42"N<br>Longitudte : $76^0$0'0"- $76^0$'7'22" E<br>Ridge peaks : 565, 582, 601, 661, 662, 654, 626, 646, 638, 583, 619, 578, 577, 653, 662, 655, 662 and 659m AMSL. | 32 MW | 96 MW | 80 x 1600 | 128 MW (32 MW + 96 MW) |

1. ಸದರಿ ಯೋಜನೆಯನ್ನು 31–7–2012ರೊಳಗೆ ಅನುಷ್ಠಾನಗೊಳಿಸತಕ್ಕದ್ದು.
2. ಸದರಿ ಯೋಜನೆಯನ್ನು ಅನುಷ್ಠಾನಗೊಳಿಸುವ ಮುನ್ನ ಕಂದಾಯ / ಖಾಸಗಿ ಜಮೀನು ಕುರಿತು ಅನುಮೋದನೆ ಪಡೆಯತಕ್ಕದ್ದು.
3. ಈ ಆದೇಶವನ್ನು ರದ್ದು ಪಡಿಸುವುದು / ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 532

ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

## ಇಂಧನ ಸಚಿವಾಲಯ

**ವಿಷಯ :** ಕರ್ನಾಟಕ ವಿದ್ಯುತ್ ನಿಯಂತ್ರಣ ಆಯೋಗಕ್ಕೆ 2011–12ರ ಹಣಕಾಸು ವರ್ಷದಲ್ಲಿ ನಾಲ್ಕನೇ ಕಂತು ಸಹಾಯಾನುದಾನದ ಹಣ ಬಿಡುಗಡೆ ಕುರಿತು.

**ಓದಲಾಗಿದೆ :** 1. ಸರ್ಕಾರಿ ಆದೇಶ ಸಂಖ್ಯೆ : ಇಎನ್ 21 ಪಿಎಸ್‌ಆರ್ 2011, ದಿನಾಂಕ : 20–04–2011.
2. ಸರ್ಕಾರಿ ಆದೇಶ ಸಂಖ್ಯೆ : ಇಎನ್ 21 ಪಿಎಸ್‌ಆರ್ 2011, ದಿನಾಂಕ : 06–07–2011.
3. ಸರ್ಕಾರಿ ಆದೇಶ ಸಂಖ್ಯೆ : ಇಎನ್ 21 ಪಿಎಸ್‌ಆರ್ 2011, ದಿನಾಂಕ : 17–11–2011.

**ಪ್ರಸ್ತಾವನೆ :**

1. 2011–12 ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳ ಸಂಪುಟ–7 ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಸಹಾಯಾನುಧನ ಸಲುವಾಗಿ 408 ಲಕ್ಷ ರೂ.ಗಳ ಅವಕಾಶವನ್ನು ಕಲ್ಪಿಸಲಾಗಿದೆ. ಈ ಸಹಾಯಾನುದಾನವನ್ನು 4 ಕಂತುಗಳಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲು ಉದ್ದೇಶಿಸಲಾಗಿದೆ.

2. ಮೇಲೆ ಓದಲಾದ ಸರ್ಕಾರಿ ಆದೇಶ 1 ಮತ್ತು 2ರಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2011–12 ನೇ ಸಾಲಿಗೆ ಮೊದಲನೇ, ಎರಡನೇ ಹಾಗೂ ಮೂರನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 3,06,00,000/– ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಲಾಗಿರುತ್ತದೆ.

3. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗದ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ 2011–12 ನೇ ಸಾಲಿಗೆ ನಾಲ್ಕನೇ ತ್ರೈಮಾಸಿಕ ಅವಧಿಗೆ ಸಹಾಯಾನುದಾನ ರೂ. 1,02,00,000/– ನ್ನು ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣಾ ಆಯೋಗಕ್ಕೆ ಬಿಡುಗಡೆ ಮಾಡುವ ಬಗ್ಗೆ ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಎನ್ 21 ಪಿಎಸ್ ಆರ್ 2011, ಬೆಂಗಳೂರು, ದಿನಾಂಕ : 03ನೇ ಫೆಬ್ರವರಿ 2012**

ಸರ್ಕಾರವು 2011–12 ನೇ ಹಣಕಾಸು ವರ್ಷದ ನಾಲ್ಕನೇ ತ್ರೈಮಾಸಿಕ ಅವಧಿಗೆ "2801–80–101–1–07–101 ಸಹಾಯಾನುದಾನ (ಯೋಜನೇತರ)" ಲೆಕ್ಕ ಶೀರ್ಷಿಕೆಯಡಿ ಸಿಬ್ಬಂದಿ ಮತ್ತು ಸಾಮಾನ್ಯ ವೆಚ್ಚ ಸಲುವಾಗಿ ರೂ. 1,02,00,000/– (ಒಂದು ಕೋಟಿ ಎರಡು ಲಕ್ಷ ರೂ.ಗಳು ಮಾತ್ರ) ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗಕ್ಕೆ ಬಿಡುಗಡೆ ಮಾಡಿದೆ.

ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು ಸರ್ಕಾರದ ಪ್ರಧಾನ ಕಾರ್ಯದರ್ಶಿ, ಇಂಧನ ಇಲಾಖೆ ಇವರ ಮೇಲು ರುಜುವನ್ನು "Payees Receipt" ನಲ್ಲಿ ಪಡೆದು ಹಣವನ್ನು ಪಡೆಯತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 21 ಟಿಎಫ್ ಪಿ 2006 ದಿನಾಂಕ : 02–09–2006, ಎಫ್‌ಡಿ 1 ಟಿಎಫ್‌ಪಿ 2008 ದಿನಾಂಕ : 16–05–2008, ಎಫ್‌ಡಿ 1 ಟಿಎಫ್‌ಪಿ 2010 ದಿನಾಂಕ : 20–04–2010 ಮತ್ತು ಎಫ್‌ಡಿ 4 ಬಿಪಿಇ 2011 ದಿನಾಂಕ : 31–03–2001 ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 533

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ.

## ಒಳಾಡಳಿತ ಸಚಿವಾಲಯ

**ವಿಷಯ :** ಕರ್ನಾಟಕ ಇಂಡಸ್ಟ್ರಿಯಲ್ ಫೋರ್ಸ್ ಘಟಕ ಕಛೇರಿ ಕಟ್ಟಡ ನಿರ್ಮಿಸಲು ತಯಾರಿಸಿದ ರೇಖಾ ನಕ್ಷೆಗೆ ಮತ್ತು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ನೀಡಿ ರೂ. 232.00 ಲಕ್ಷಗಳ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರ ಸಂಖ್ಯೆ : ಬಿಸಿ/1/2011–12, ದಿನಾಂಕ 05–01–2012.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ : 05–01–2012 ರ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿ, ಕರ್ನಾಟಕ ಇಂಡಸ್ಟ್ರಿಯಲ್ ಸೆಕ್ಯೂರಿಟಿ ಫೋರ್ಸ್ "ಘಟಕದ ಒಂದು ಬೆಟಾಲಿಯನ್ ಸ್ಥಾಪಿಸಲು ಆದೇಶ ಸಂಖ್ಯೆ : ಹೆಚ್‌ಡಿ 05 ಪಿಓಪಿ 2011 ದಿನಾಂಕ : 14/01–2011 ರಲ್ಲಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಸದರಿ ಘಟಕದ ಮೂಲಭೂತ ಸೌಕರ್ಯಕ್ಕಾಗಿ 2011–12 ನೇ ಸಾಲಿನ ಆಯವ್ಯಯದ ಲೆಕ್ಕ ಶೀರ್ಷಿಕೆ 2055–00–118–0–01–059 ಇತರೆ ಖರ್ಚು ರಡಿ ಒದಗಿಸಲಾದ ರೂ. 232.00 ಲಕ್ಷಗಳನ್ನು ಒದಗಿಸಲಾಗಿದೆ. ಆದ್ದರಿಂದ ಸದರಿ ಕಟ್ಟಡ ನಿರ್ಮಾಣವನ್ನು ರೂ. 232.00 ಲಕ್ಷಗಳಲ್ಲಿ ನಿರ್ಮಿಸಲು ತಯಾರಿಸಿದ ರೇಖಾ ನಕ್ಷೆ ಮತ್ತು ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಹಾಗೂ ರೂ. 232.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರುರವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 11 ಪಿಬಿಎಲ್ 2012, ಬೆಂಗಳೂರು, ದಿನಾಂಕ : 08ನೇ ಫೆಬ್ರವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ಇಂಡಸ್ಟ್ರಿಯಲ್ ಫೋರ್ಸ್ ಘಟಕ ಕಛೇರಿ ಕಟ್ಟಡವನ್ನು ರೂ. 232.00 ಲಕ್ಷಗಳ ವೆಚ್ಚದಲ್ಲಿ ನಿರ್ಮಿಸಲು ತಯಾರಿಸಿದ ರೇಖಾ ನಕ್ಷೆ ಮತ್ತು ಅಂದಾಜು ಪಟ್ಟಿಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆ ಹಾಗೂ ಸದರಿ ಕಟ್ಟಡ ಕಾಮಗಾರಿಯನ್ನು ಕೈಗೊಳ್ಳಲು ರೂ. 232.00 ಲಕ್ಷಗಳನ್ನು (ಇನ್ನೂರ ಮೂವತ್ತೆರಡು ಲಕ್ಷಗಳು ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ.

ಈ ವೆಚ್ಚವನ್ನು 2011–12 ನೇ ಸಾಲಿನ ಲೆಕ್ಕ ಶೀರ್ಷಿಕೆ 2055–00–118–0–01–059 ಇತರೆ ಖರ್ಚುಗಳಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ : ಒಸಾಇ 3780 ಆಂಆಸ: 2012 ದಿನಾಂಕ : 25–01–2012 ರ ಸಹಮತಿ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಆಇ : 01 : ಟಿಎಫ್ ಪಿ : 2008 ದಿನಾಂಕ : 16–05–2008 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಲಾದ ಆರ್ಥಿಕ ಅಧಿಕಾರದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಪಿ.ಆರ್. 534

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ವೆಚ್ಚ)

## ಒಳಾಡಳಿತ ಸಚಿವಾಲಯ

**ವಿಷಯ :** ಎ.ಡಿ.ಜಿ.ಪಿ. [ನೇಮಕಾತಿ ಮತ್ತು ತರಬೇತಿ] ಮತ್ತು ಇವರಿಗೆ ಹೊಂದಿಕೊಂಡ ಬೆಂಬಲ ಸಿಬ್ಬಂದಿಗಳನ್ನು ಶಾಶ್ವತ ನೆಲೆಯಲ್ಲಿ ಮುಂದುವರೆಸುವ ಕುರಿತು.

**ಓದಲಾಗಿದೆ :** ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರವರ ಪತ್ರದ ಸಂಖ್ಯೆ : ಆರ್.ಎಲ್.ಎನ್ [3]45/99–2000 ದಿನಾಂಕ 24–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು ಇವರು ಎ.ಡಿ.ಜಿ.ಪಿ. [ನೇಮಕಾತಿ ಮತ್ತು ತರಬೇತಿ] ಮತ್ತು ಇವರಿಗೆ ಹೊಂದಿಕೊಂಡ ಬೆಂಬಲ ಸಿಬ್ಬಂದಿಗಳನ್ನು ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 26 ಪಿಓಪಿ 2000 ದಿನಾಂಕ 26–04–2000 ರಲ್ಲಿ ಸೃಜನೆ ಮಾಡಿದ್ದು ತದನಂತರ ವಿವಿಧ ಸರ್ಕಾರಿ ಆದೇಶಗಳಲ್ಲಿ ಈ ಹುದ್ದೆಗಳನ್ನು ಕಾಲಕಾಲಕ್ಕೆ ಮುಂದುವರೆಸಿಕೊಂಡು ಬರಲಾಗಿದ್ದು, ಕೊನೆಯದಾಗಿ ಸರ್ಕಾರಿ ಆದೇಶ ಸಂಖ್ಯೆ : ಹೆಚ್‌ಡಿ 189 ಪಿಓಪಿ 2011 ದಿನಾಂಕ : 24–10–2011 ರಲ್ಲಿ ಮುಂದುವರೆಸಿದ ಅವಧಿಯು ದಿನಾಂಕ : 18–2–2012ಕ್ಕೆ ಕೊನೆಗೊಂಡಿರುವುದರಿಂದ ಹಾಗೂ ಸದರಿ ಹುದ್ದೆಗಳ ಅವಶ್ಯಕತೆಯಿರುವುದರಿಂದ ಈ ಹುದ್ದೆಗಳನ್ನು ಶಾಶ್ವತ ನೆಲೆಯಲ್ಲಿ ಮುಂದುವರೆಸುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಹುದ್ದೆಗಳನ್ನು ಸೃಜಿಸಿ ಐದು ವರ್ಷಗಳ ಕಾಲ ಮುಂದುರೆಸಿಕೊಂಡು ಬಂದಿದ್ದು ಹಾಗೂ ಈ ಹುದ್ದೆಗಳು ಅವಶ್ಯಕತೆಯಿರುವುದಾಗಿ ತಿಳಿಸಿರುವ ಪ್ರಯುಕ್ತ ಎ.ಡಿ.ಜಿ.ಪಿ. [ನೇಮಕಾತಿ ಮತ್ತು ತರಬೇತಿ] ಮತ್ತು ಇವರಿಗೆ ಹೊಂದಿಕೊಂಡ ಬೆಂಬಲ ಸಿಬ್ಬಂದಿಗಳ ಪೈಕಿ

ಒಂದು ದಲಾಯತ್ ಹುದ್ದೆಯನ್ನು ರದ್ದುಪಡಿಸಲು ಮತ್ತು ಇನ್ನುಳಿದ 12 ಹುದ್ದೆಗಳನ್ನು ಶಾಶ್ವತನೆಲೆಯಲ್ಲಿ ಮುಂದುವರೆಸಲು ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಹೆಚ್‌ಡಿ 189 ಪಿಓಪಿ 2011, ಬೆಂಗಳೂರು, ದಿನಾಂಕ : 06ನೇ ಫೆಬ್ರವರಿ 2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿಲನ್ನೆಲೆಯಲ್ಲಿ ಪೊಲೀಸ್ ಇಲಾಖೆಯಲ್ಲಿನ ಎ.ಡಿ.ಜಿ.ಪಿ. [ನೇಮಕಾತಿ ಮತ್ತು ತರಬೇತಿ] ಮತ್ತು ಇವರಿಗೆ ಹೊಂದಿಕೊಂಡ ಈ ಕೆಳಕಂಡ ಬೆಂಬಲ ಸಿಬ್ಬಂದಿಗಳನ್ನು ದಿನಾಂಕ : 19-02-2012 ರಿಂದ ಜಾರಿಗೆ ಬರುವಂತೆ ಶಾಶ್ವತ ನೆಲೆಯಲ್ಲಿ ಮುಂದುವರೆಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ ಹಾಗೂ ಮುಂದುವರೆಸಲಾಗದ ಒಂದು ದಲಾಯತ್ ಹುದ್ದೆಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಗೊಳಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಗಳ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1 | ಎ.ಡಿ.ಜಿ.ಪಿ. [ನೇಮಕಾತಿ ಮತ್ತು ತರಬೇತಿ] | 01 |
| 2 | ಪ್ರ.ದ.ಸ. | 01 |
| 3 | ಶೀಘ್ರಲಿಪಿಗಾರ | 01 |
| 4 | ಬೆರಳಚ್ಚುಗಾರ | 01 |
| 5 | ದ್ವಿ.ದ.ಸ. | 01 |
| 6 | ಎ.ಹೆಚ್.ಸಿ. | 01 |
| 7 | ಎ.ಹೆಚ್.ಸಿ. [ಚಾಲಕ] | 02 |
| 8 | ಎ.ಪಿ.ಸಿ. | 03 |
| 9 | ದಲಾಯತ್ | 01 |
| | **ಒಟ್ಟು** | **12** |

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 337 ವೆಚ್ಚ 11/2011 ದಿನಾಂಕ : 30-01-2012 ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಬಿ. ರಾಜಮ್ಮ**

ಪಿ.ಆರ್. 535

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೋಲೀಸ್ ವೆಚ್ಚ)

## ಶಿಕ್ಷಣ ಸಚಿವಾಲಯ

### ಸುತ್ತೋಲೆ

**ಸಂಖ್ಯೆ : ಇಡಿ 35 ಎಸ್‌ಎಲ್‌ಬಿ 2011, ಬೆಂಗಳೂರು, ದಿನಾಂಕ : 24-01-2012.**

**ವಿಷಯ** : ಪ್ರೌಢಶಾಲಾ ಶಿಕ್ಷಕರಿಗೆ ಮಾಸಿಕ 200-00 ರೂ.ಗಳ ವಿಶೇಷ ಭತ್ಯೆ ಮುಂದುವರೆಸುವ ಬಗ್ಗೆ ಸ್ಪಷ್ಟೀಕರಣ.

**ಉಲ್ಲೇಖ** :
1. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 8 ಎಸ್‌ಆರ್‌ಪಿ 2006, ದಿನಾಂಕ : 29-03-2006.
2. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 14 ಎಸ್‌ಆರ್‌ಪಿ 2006, ದಿನಾಂಕ : 12-05-2006.
3. ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 31 ಎಸ್‌ಆರ್‌ಪಿ 2007, ದಿನಾಂಕ : 29-08-2008.
4. ಸರ್ಕಾರದ ಆದೇಶ ಸಂಖ್ಯೆ : ಆಇ 104 ಸೇ.2/2009[ಪ], ದಿನಾಂಕ : 15-04-2009.
5. ಖಜಾನೆ ನಿರ್ದೇಶಕರು, ಬೆಂಗಳೂರು ಇವರ ಅ.ಸ.ಪ. ಸಂಖ್ಯೆ : ಖನಿ.ಪ್ರಕಿಯೆ/6/2009-10, ದಿನಾಂಕ : 02-07-2011.
6. ಆರ್ಥಿಕ ಇಲಾಖೆಯ ಅನದಿಕೃತ ಟಿಪ್ಪಣಿ ಸಂಖ್ಯೆ. ಆಇ 352 ಸೇ 2/2011 [ಪ], ದಿನಾಂಕ : 05-08-2011.

ಉಲ್ಲೇಖಿತ ದಿನಾಂಕ : 29-03-2006 ರ ಆದೇಶದನ್ವಯ ಅನುದಾನಿತ ಮತ್ತು ಸ್ಥಳೀಯ ಸಂಸ್ಥೆಗಳ ಪ್ರಾಥಮಿಕ ಶಾಲಾ ಶಿಕ್ಷಕರು ಸೇರಿದಂತೆ ರಾಜ್ಯದ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ದಿನಾಂಕ : 01-04-2006 ರಿಂದ ಜಾರಿಗೆ ಬರುವಂತೆ ಮಾಸಿಕ ರೂ. 200-00 ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡಲಾಗಿದೆ.

ಉಲ್ಲೇಖ [2]ರ ದಿನಾಂಕ : 12-05-2006ರ ಆದೇಶದನ್ವಯ ಅನುದಾನಿತ ಶಿಕ್ಷಣ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ಪ್ರೌಢಶಾಲಾ ಶಿಕ್ಷಕರೂ ಸೇರಿದಂತೆ ರಾಜ್ಯದ ಪ್ರೌಢಶಾಲಾ ಶಿಕ್ಷಕರಿಗೆ ಮಾಸಿಕ ರೂ. 200-00 ಗಳ ವಿಶೇಷ ಭತ್ಯೆ ಮಂಜೂರು ಮಾಡಲಾಗಿದೆ.

ಉಲ್ಲೇಖ [4]ರ ಸರ್ಕಾರದ ಪತ್ರದಲ್ಲಿ ದಿನಾಂಕ : 29-08-2008ರ ಸರ್ಕಾರಿ ಆದೇಶ ಸಂಖ್ಯೆ : ಆಇ 31 ಎಸ್‌ಆರ್‌ಪಿ 2007ರ ಕ್ರಮ ಸಂಖ್ಯೆ : [03] ರಲ್ಲಿ ದಿನಂಕ : 12-05-2006 ಸರ್ಕಾರಿ ಆದೇಶ ಸಂಖ್ಯೆ : ಎಫ್‌ಡಿ 14 ಎಸ್ ಆರ್ ಪಿ 2006 ರಲ್ಲಿ ಮಂಜೂರು ಮಾಡಿರುವ ಮಾಸಿಕ ರೂ. 200-00 ಗಳ ವಿಶೇಷ ಭತ್ಯೆಯನ್ನು ಆ ದಿನಾಂಕದಂದು ಈ ಸೌಲಭ್ಯ ಪಡೆಯುತ್ತಿರುವ ಶಿಕ್ಷಕರುಗಳಿಗೆ ಮಾತ್ರ ಮುಂದಿನ ಆದೇಶಗಳವರೆಗೆ ಮುಂದುವರೆಸಲಾಗಿದ್ದು, ಈ ಆದೇಶವನ್ನು ಹೊರಡಿಸಿದ ನಂತರ ನೇಮಕಗೊಂಡ ಶಿಕ್ಷಕರುಗಳಿಗೆ ರೂ. 200-00 ಗಳ ಮಾಸಿಕ ವಿಶೇಷ ಭತ್ಯೆಯನ್ನು ನೀಡಲು ಸಾಧ್ಯವಿಲ್ಲವೆಂದು ಸ್ಪಷ್ಟೀಕರಣ ನೀಡಲಾಗಿದೆ.

ಆದುದರಿಂದ ಸರ್ಕಾರಿ ಆದೇಶದಲ್ಲಿನ ಸೂಚನೆಗಳಂತೆ ಸೌಲಭ್ಯ ಅನ್ವಯವಾಗದ ಶಿಕ್ಷಕರುಗಳ ಸಂಬಂಧ, ಕ್ಲೇಮುಗಳನ್ನು ಮಾಡಬಾರದು. ಶಿಕ್ಷಣ ಇಲಾಖೆಯ ಸಂಬಂಧಿಸಿದ ಡಿ.ಡಿ.ಪಿ.ಐ.ಗಳು/ಅಧಿಕಾರಿಗಳು ಹೆಚ್.ಆರ್.ಎಂ.ಎಸ್.ನಲ್ಲಿನ ಮಾಹಿತಿಯನುಸಾರ ಅರ್ಹರಾದ ಶಿಕ್ಷಕರುಗಳ ಸಂಬಂಧ ಮಾತ್ರ ಈ ಕ್ಲೇಮುಗಳನ್ನು ಸೆಳೆಯಲು ಅನುಕೂಲವಾಗುವಂತೆ, ಹೆಚ್.ಆರ್.ಎಂ.ಎಸ್.ನಲ್ಲಿ ಖಜಾನೆಗೆ ಮಾಹಿತಿ ಒದಗಿಸಿ, ಅರ್ಹ ಶಿಕ್ಷಕರಿಗೆ ಮಾತ್ರ ವಿಶೇಷ ಭತ್ಯೆ ಸೆಳೆಯಲು ಕಟ್ಟುನಿಟ್ಟಿನ ಕ್ರಮ ಕೈಗೊಳ್ಳುವಂತೆ ಈ ಮೂಲಕ ಸೂಚಿಸಿದೆ.

**ಹೆಚ್.ಟಿ. ಜಯರಾಂ**

ಪಿ.ಆರ್. 536

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ. [ಪ್ರೌಢ]

## ಶಿಕ್ಷಣ ಸಚಿವಾಲಯ

**ವಿಷಯ :** ಪರಿಶಿಷ್ಠ ಜಾತಿ / ಪರಿಶಿಷ್ಠ ಪಂಗಡದವರು ನಡೆಸುತ್ತಿರುವ ಪ್ರಿಯದರ್ಶಿನಿ ಪ್ರಥಮ ದರ್ಜೆ ಮಹಾವಿದ್ಯಾಲಯ, ರಟ್ಟೀಹಳ್ಳಿ, ಹಿರೇಕೆರೂರು ಕಾಲೇಜು ಹಾಗೂ ಅಲ್ಲಿನ ಬೋಧಕರ ಹುದ್ದೆಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 551 ಯುಪಿಸಿ 99 ದಿನಾಂಕ: 07–08–2003
2. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 13–05–2009
3. ಸರ್ಕಾರಿ ಅಧಿಸೂಚನೆ ಸಂಖ್ಯೆ: ಇಡಿ 30 ಯುಪಿಸಿ 2008 ದಿನಾಂಕ: 05–10–2009
4. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ: 02: ಪಜಾ.ಪ.ಪಂ: ವೇಅನು: ಗುವಿ: 2010–11 ಖಾಕಾವಿ–2, ದಿನಾಂಕ: 07–09–2010
5. ಸಚಿವ ಸಂಪುಟದ ಟಿಪ್ಪಣಿ ಸಂಖ್ಯೆ: ಸಿ: 499: 2011, ದಿನಾಂಕ: 28–10–2011
6. ಸರ್ಕಾರದ ಆದೇಶ ಸಂಖ್ಯೆ: ಇಡಿ 168 ಯುಪಿಸಿ 2010, ದಿನಾಂಕ: 03–12–2011
7. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:22: ಪಜಾ.ಪ.ಪಂ: ವೇಅ/ಧಾವಿ/ಖಾಕಾವಿ–2/ 2011–12/ನೇ.ವಿ., ದಿನಾಂಕ: 21–12–2011.

**ಪ್ರಸ್ತಾವನೆ :**

ಮೇಲೆ ಓದಲಾದ(1)ರ ಸರ್ಕಾರಿ ಅಧಿಸೂಚನೆಯನ್ವಯ ರಚಿಸಲಾದ ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ನಿಯಮ 8(1) ರನ್ವಯ ದಿನಾಂಕ: 01–06–1987ರ ನಂತರ ಪ್ರಾರಂಭಿಸಲಾದ ಯಾವುದೇ ಖಾಸಗಿ ಪದವಿ ಕಾಲೇಜುಗಳು ಮತ್ತು ವಿಷಯಗಳನ್ನು ಅನುದಾನದ ವ್ಯಾಪ್ತಿಗೆ ಒಳಪಡಿಸಲು ಅವಕಾಶವಿರುವುದಿಲ್ಲ.

ರಾಜ್ಯದಲ್ಲಿ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಗಳು ದಿನಾಂಕ: 01–06–1987ರಿಂದ ದಿನಾಂಕ: 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲಾಗುತ್ತಿರುವ ಕಾಲೇಜುಗಳು ಮತ್ತು ಕೋರ್ಸ್‌ಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರ ತೀರ್ಮಾನಿಸಿ ಈ ಕುರಿತು ನಿಯಮಗಳನ್ನು ರಚಿಸಲು ದಿನಾಂಕ: 18–02–2009ರಂದು ಜರುಗಿದ ಸಚಿವ ಸಂಪುಟ ಸಭೆಯು ಅನುಮೋದನೆ ನೀಡಿದೆ.

ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಆಡಳಿತ ಮಂಡಳಿಯಿಂದ ನಡೆಸಲ್ಪಡುತ್ತಿರುವ ಖಾಸಗಿ ಪದವಿ ಕಾಲೇಜುಗಳಿಗೆ ಸಂಬಂಧಿಸಿದಂತೆ ಮಾತ್ರ ಮೇಲೆ ಹೇಳಿದ ನಿಯಮ 8ಕ್ಕೆ ಸೂಕ್ತ ಸೇರ್ಪಡೆ ಮಾಡಿ ದಿನಾಂಕ: 01–06–87 ರಿಂದ 31–03–95ರ ಅವಧಿಯಲ್ಲಿ ಪ್ರಾರಂಭಿಸಲ್ಪಟ್ಟ ಪರಿಶಿಷ್ಠ ಜಾತಿ /ಪರಿಶಿಷ್ಠ ಪಂಗಡದವರು ನಡೆಸುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೊಳಪಡಿಸಲು ಓದಲಾದ (2)ರ ದಿನಾಂಕ: 13–05–2009ರ ಅಧಿಸೂಚನೆಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಅದರಂತೆ ಓದಲಾದ (3)ರ ದಿನಾಂಕ: 05–10–2009ರಲ್ಲಿ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಥಮ ದರ್ಜೆ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸಲು ಸರ್ಕಾರವು ಕೆಲವು ಮಾನದಂಡಗಳನ್ನು ನಿಗದಿಪಡಿಸಿ ಆದೇಶ ಹೊರಡಿಸಿದೆ. ಮೇಲೆ ಓದಲಾದ (4)ರ ದಿನಾಂಕ: 05–10–2010ರ ಪ್ರಸ್ತಾವನೆಯಲ್ಲಿ ಕಾಲೇಜು ಶಿಕ್ಷಣ ಆಯುಕ್ತರು ಸದರಿ ಕಾಲೇಜಿನ ಬೋಧಕ ಮತ್ತು ಬೋಧಕೇತರ ಸಿಬ್ಬಂದಿ ವರ್ಗದವರನ್ನು ವೇತನಾನುದಾನಕ್ಕೆ ಒಳಪಡಿಸುವ ಕುರಿತು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದಾರೆ. ಸದರಿ ಕಾಲೇಜನ್ನು ಹಾಗೂ ಅದರಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ಆರ್ಥಿಕ ಇಲಾಖೆಯ ಸಹಮತಿ ಕೋರಲಾಗಿತ್ತು. ಈಗಾಗಲೇ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ನಡೆಸುತ್ತಿರುವ 5 ಕಾಲೇಜುಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸುವ ಕುರಿತು ವಿಧಿಸಲಾಗಿದ್ದ ಷರತ್ತುಗಳೊಂದಿಗೆ ಹೆಚ್ಚುವರಿಯಾಗಿ ಕೆಲವು ಷರತ್ತುಗಳನ್ನು ವಿಧಿಸಿ ಅವುಗಳನ್ನು ಪೂರೈಸಿದ್ದಲ್ಲಿ ಎರಡನೇ ಹಂತವಾಗಿ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಆರ್ಥಿಕ ಇಲಾಖೆಯು ತಿಳಿಸಿದೆ. ಆದರೆ, ಪ್ರಥಮ ಹಂತವಾಗಿ ವೇತನಾನುದಾನಕ್ಕೆ ಒಳಪಡಿಸಲಾದ 5 ಕಾಲೇಜುಗಳಿಗೆ ವಿಧಿಸದೇ ಇದ್ದ ಹೆಚ್ಚುವರಿ ಷರತ್ತುಗಳನ್ನು ವಿಧಿಸಿತ್ತು. ಈ ಹೆಚ್ಚುವರಿ ಷರತುಗಳನ್ನು ವಿಧಿಸದಂತೆ ವಿನಾಯಿತಿ ನೀಡುವಂತೆ ಸಚಿವ ಸಂಪುಟದ ಅನುಮೋದನೆ ಕೋರಲಾಗಿದ್ದು, ಸಚಿವ ಸಂಪುಟವು ಮೇಲೆ ಓದಲಾದ (5)ರಲ್ಲಿ ಆರ್ಥಿಕ ಇಲಾಖೆಯು ಹೆಚ್ಚುವರಿಯಾಗಿ ವಿಧಿಸಿರುವ ಷರತ್ತುಗಳನ್ನು ಸಡಿಲಿಸಿ, ಸದರಿ ಕಾಲೇಜು ಹಾಗೂ ಇತರೆ 9 ಕಾಲೇಜುಗಳನ್ನು ಮತ್ತು ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಅರ್ಹ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಅನುಮತಿ ನೀಡಿದೆ. ಅದರಂತೆ, ಕಾಲೇಜು ಶಿಕ್ಷಣ ನಿರ್ದೇಶನಾಲಯವು ಪ್ರಿಯದರ್ಶಿನಿ ಪ್ರಥಮ ದರ್ಜೆ ಮಹಾವಿದ್ಯಾಲಯ, ರಟ್ಟೀಹಳ್ಳಿ, ಹಿರೇಕೆರೂರು ಈ ಕಾಲೇಜನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರಕ್ಕೆ ಸಲ್ಲಿಸಿದ ಪ್ರಸ್ತಾವನೆಯಲ್ಲಿ ಪ್ರಸ್ತಾಪಿಸಲಾದ ಅಭ್ಯರ್ಥಿಗಳ ವಿದ್ಯಾರ್ಹತೆ, ವಿಷಯಗಳ ಕಾರ್ಯಭಾರ ಮತ್ತು ಮೀಸಲಾತಿ ಪರಿಶೀಲಿಸಿ ಸದರಿ ಕಾಲೇಜನ್ನು ಮತ್ತು ಕಾಲೇಜಿನಲ್ಲಿ ವಿಷಯವಾರು ಹುದ್ದೆಗಳ ಎದುರು ಕಾರ್ಯ ನಿರ್ವಹಿಸುತ್ತಿರುವ ಅರ್ಹ ಉಪನ್ಯಾಸಕರುಗಳನ್ನು ವೇತನಾನುದಾನದ ವ್ಯಾಪ್ತಿಗೆ ಈಗಾಗಲೇ ಮೇಲೆ ಓದಲಾದ (6)ರ ಆದೇಶದಲ್ಲಿ ಒಳಪಡಿಸಲಾಗಿರುತ್ತದೆ. ಆದರೆ, ಕಾರ್ಯಭಾರದ ಕೊರತೆಯಿಂದಾಗಿ ಆಂಗ್ಲಭಾಷೆ ಮತ್ತು ಹಿಂದಿ ಹಾಗೂ ಸಮಾಜಶಾಸ್ತ್ರ ಬೋಧಕರ ವಿಷಯದಲ್ಲಿ ಪ್ರಸ್ತಾಪಿಸಲಾಗಿದ್ದ ಬೋಧಕರು ನಿಗದಿತ ವಿದ್ಯಾರ್ಹತೆಯನ್ನು ಹೊಂದದೇ ಇದ್ದ ಪ್ರಯುಕ್ತ ಸದರಿ ವಿಷಯಗಳನ್ನು ಹಾಗೂ ಅವುಗಳನ್ನು ಬೋಧಿಸುತ್ತಿದ್ದ ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ತರಲಾಗಿರಲಿಲ್ಲ. ನಂತರದಲ್ಲಿ ಮೇಲೆ ಓದಲಾದ (7)ರ ಪತ್ರದಲ್ಲಿ ಕಾಲೇಜು ಶಿಕ್ಷಣ ನಿರ್ದೇಶನಾಲಯವು ಆಂಗ್ಲಭಾಷೆ ಮತ್ತು ಹಿಂದಿ ಭಾಷೆಗಳನ್ನು ಹಾಗೂ ಅವುಗಳನ್ನು ಬೋಧಿಸುತ್ತಿರುವ ಕ್ರಮವಾಗಿ 1 ಮತ್ತು 2 ಬೋಧಕರನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲು ನಿಗದಿತ ಕಾರ್ಯಭಾರ ಹೊಂದಿರುವುದಾಗಿ, ಹಾಗೆಯೇ ಸಮಾಜಶಾಸ್ತ್ರ ವಿಷಯದ ಬೋಧಕರ ಹುದ್ದೆಗೆ ಪ್ರಸ್ತಾಪಿಸಲಾಗಿರುವ ಶ್ರೀ ಸಿ. ಆರ್. ಹಿತ್ತಲಮನಿ ಇವರು ಎಂ.ಫಿಲ್. ಪದವಿಯನ್ನು ಏಪ್ರಿಲ್ 2009ರಂದು ಪಡೆದಿರುವುದರಿಂದ ಸದರಿ ವಿಷಯಗಳನ್ನು ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಬೇಕೆಂದು ಕೋರಲಾಗಿದೆ. ಆದುದರಿಂದ, ಆಂಗ್ಲಭಾಷೆ, ಹಿಂದಿ ಮತ್ತು ಸಮಾಜಶಾಸ್ತ್ರ ವಿಷಯಗಳಲ್ಲಿ ನಿಗದಿತ ಕಾರ್ಯಭಾರವಿರುವುದರಿಂದ ಹಾಗೂ ಅವುಗಳನ್ನು ಬೋಧಿಸುತ್ತಿರುವ ಬೋಧಕರು ನಿಗದಿತ ವಿದ್ಯಾರ್ಹತೆಯನ್ನು ಪಡೆದಿರುವುದರಿಂದ ಶ್ರೀ ರಾಘವೇಂದ್ರ ಎ.ಜಿ., (ಆಂಗ್ಲಭಾಷೆ), ಡಾ: ಎಂ.ಆರ್.ಅಂಚಿ(ಹಿಂದಿ), ಡಾ: ಅನಿತಾ. ಎಂ.ಬೆಳಗಾಂವಕರ್ (ಹಿಂದಿ) ಮತ್ತು ಶ್ರೀ ಸಿ.ಆರ್. ಹಿತ್ತಲಮನಿ (ಸಮಾಜಶಾಸ್ತ್ರ)

ಇವರುಗಳ ಬೋಧಕರ ಹುದ್ದೆ ಮಂಜೂರು ಮಾಡಬಹುದಾಗಿರುವುದರಿಂದ, ಸದರಿಯವರನ್ನು ಯುಜಿಸಿ ವೇತನ ಶ್ರೇಣಿಯಲ್ಲಿ ಈ ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಅನುದಾನದ ವ್ಯಾಪ್ತಿಗೆ ಒಳಪಡಿಸಲು ಸರ್ಕಾರ ತೀರ್ಮಾನಿಸಿದೆ.

ಆದ್ದರಿಂದ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಇಡಿ 168 ಯುಪಿಸಿ 2010 ಬೆಂಗಳೂರು, ದಿನಾಂಕ: 06–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡಗಳ ಆಡಳಿತ ಮಂಡಳಿಗಳಿಗೆ ಸೇರಿದ ಶಿಕ್ಷಣ ಸಂಸ್ಥೆಗಳ ವತಿಯಿಂದ ದಿನಾಂಕ: 01–06–1987 ರಿಂದ 31–03–1995ರ ಅವಧಿಯಲ್ಲಿ ಪ್ರಾರಂಭಿಸಿ ನಡೆಸಲ್ಪಡುತ್ತಿರುವ ಪ್ರಿಯದರ್ಶಿನಿ ಪ್ರಥಮ ದರ್ಜೆ ಮಹಾವಿದ್ಯಾಲಯ, ರಟ್ಟೀಹಳ್ಳಿ., ಹಿರೇಕೆರೂರು ಕಾಲೇಜು ಇಲ್ಲಿ ಆಂಗ್ಲಭಾಷೆ, ಹಿಂದಿ ಮತ್ತು ಸಮಾಜಶಾಸ್ತ್ರ ವಿಷಯಗಳನ್ನು ಹಾಗೂ ಸದರಿ ಹುದ್ದೆಯ ಎದುರು ಕರ್ತವ್ಯ ನಿರ್ವಹಿಸುತ್ತಿರುವ ಈ ಕೆಳಕಂಡ ಅರ್ಹ ಸಹಾಯಕ ಪ್ರಾಧ್ಯಾಪಕರನ್ನು ಕೆಳಕಂಡ ಷರತ್ತಿಗೊಳಪಟ್ಟು ಈ ಆದೇಶ ಹೊರಡಿಸಿದ ದಿನಾಂಕದಿಂದ ಆರ್ಥಿಕ ಸೌಲಭ್ಯದೊಂದಿಗೆ ಜಾರಿಗೆ ಬರುವಂತೆ ವೇತನಾನುದಾನದ ವ್ಯಾಪ್ತಿಗೆ ತರಲಾಗಿದೆ.

| ಕ್ರಮ ಸಂಖ್ಯೆ | ವೇತನಾನುದಾನಕ್ಕೆ ಒಳಪಡಿಸಿದ ಬೋಧಕರ ಹೆಸರು | ವೇತನಾನು ದಾನಕ್ಕೆ ಒಳಪಡಿಸಿದ ಹುದ್ದೆ / ವಿಷಯ | ಪರಿಗಣಿಸಲಾದ ಮೀಸಲಾತಿ | ವೇತನಾನುದಾನಕ್ಕೆ ಒಳಪಡಿಸಿದ ಹುದ್ದೆಗಳ ಸಂಖ್ಯೆ | ಕಾರ್ಯಭಾರ | ವೇತನ ಶ್ರೇಣಿ |
|---|---|---|---|---|---|---|
| 1 | ಶ್ರೀ ರಾಘವೇಂದ್ರ ಎ.ಜಿ. | ಇಂಗ್ಲೀಷ್ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 16ಗಂಟೆ | ಯುಜಿಸಿ |
| 2 | ಡಾ: ಎಂ.ಆರ್. ಅಂಚಿ | ಹಿಂದಿ ಉಪನ್ಯಾಸಕರು | ಜಿ.ಎಂ. | 02 | 17ಗಂಟೆ | ಯುಜಿಸಿ |
| 3 | ಡಾ: ಅನಿತಾ. ಎಂ. ಬೆಳಗಾಂವಕರ್ | ಹಿಂದಿ ಉಪನ್ಯಾಸಕರು | ಪ.ಜಾ. | | 18ಗಂಟೆ | ಯುಜಿಸಿ |
| 4 | ಶ್ರೀ ಸಿ. ಆರ್. ಹಿತ್ತಲಮನಿ | ಸಮಾಜ ಶಾಸ್ತ್ರ ಉಪನ್ಯಾಸಕರು | ಅನ್ವಯಿಸುವುದಿಲ್ಲ | 01 | 18ಗಂಟೆ | ಯುಜಿಸಿ |

1. ಈ ಆದೇಶದಲ್ಲಿ ವೇತನಾನುದಾನಕ್ಕೆ ಒಳಪಟ್ಟ ಬೋಧಕರ ಸೇವೆ ಕುರಿತು ಯಾವುದೇ ಅನರ್ಹತೆ ಕಂಡು ಬಂದಲ್ಲಿ ಯಾವುದೇ ಮುನ್ಸೂಚನೆಯಿಲ್ಲದೆ, ವೇತನಾನುದಾನವನ್ನು ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
2. ಈ ನೇಮಕಾತಿಗಳಲ್ಲಿ ಮೀಸಲಾತಿಯಲ್ಲಿ ವ್ಯತ್ಯಾಸವಾಗಿರುವುದು ಕಂಡುಬಂದಲ್ಲಿ ಅಂಥವರ ವೇತನಾನುದಾನವನ್ನು ಸಹ ಹಿಂದಕ್ಕೆ ಪಡೆಯುವ ಷರತ್ತಿಗೊಳಪಟ್ಟಿದೆ.
3. ವೇತನಾನುದಾನದ ವ್ಯಾಪ್ತಿಗೆ ಒಳಪಟ್ಟಂತಹ ಮೇಲ್ಕಂಡ ಉಪನ್ಯಾಸಕರುಗಳ ವೇತನವನ್ನು ಆದೇಶ ಹೊರಡಿಸಿದ ದಿನಾಂಕದಿಂದ ವಿಸ್ತರಿಸಿರುವ ವೇತನ ಶ್ರೇಣಿಯ ಕನಿಷ್ಠ ಮೂಲ ವೇತನದಲ್ಲಿ ನಿಗದಿ ಪಡಿಸತಕ್ಕದ್ದು. ಹಾಗೂ ವೇತನಾನುದಾನದ ವ್ಯಾಪ್ತಿಗೆ ಒಳಪಡಿಸಲಾದ ಪೂರ್ವದಲ್ಲಿ ಸಲ್ಲಿಸಿರುವ ಸೇವೆಯನ್ನು ಯಾವುದೇ ಸೇವಾ ಹಾಗೂ ಪಿಂಚಣಿ ಸೌಲಭ್ಯಗಳಿಗೆ ಪರಿಗಣಿಸುವಂತಿಲ್ಲ.
4. ವೇತನಾನುದಾನ ವ್ಯಾಪ್ತಿಗೆ ತರಲಾದ ಉಪನ್ಯಾಸಕರುಗಳ ಕಾರ್ಯಭಾರದಲ್ಲಿ ಕೊರತೆ ಉದ್ಭವಿಸಿದ ಪಕ್ಷದಲ್ಲಿ ಅಂತಹ ಉಪನ್ಯಾಸಕರುಗಳನ್ನು ಕಾರ್ಯಭಾರ ಇರುವಂತಹ ಅನುದಾನಿತ ಕಾಲೇಜು / ಸರ್ಕಾರಿ ಕಾಲೇಜುಗಳ ಕಾರ್ಯಭಾರದ ಎದುರಾಗಿ ನಿಯೋಜನೆ ಮೇಲೆ ಮರು ಹಂಚಿಕೆ ಮಾಡುವ ಷರತ್ತಿಗೊಳಪಟ್ಟಿದೆ.
5. ಸಂಸ್ಥೆಯ ಬೈಲಾದಲ್ಲಿ ನಿಗದಿಪಡಿಸಿರುವಂತೆ ಆಡಳಿತ ಮಂಡಳಿಯ ಎಲ್ಲಾ ಪದಾಧಿಕಾರಿಗಳು ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದವರೇ ಆಗಿರಬೇಕು. ಒಂದು ವೇಳೆ ಅನ್ಯ ವರ್ಗದ ವ್ಯಕ್ತಿಯನ್ನು ಆಡಳಿತ ಮಂಡಳಿಯ ಪದಾಧಿಕಾರಿಗಳು ಆಯ್ಕೆ ಮಾಡಿದ್ದಲ್ಲಿ ವೇತನಾನುದಾನವನ್ನು ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
6. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು, 2003ರ ನಿಯಮ 15 (ಇ) ರಡಿಯಲ್ಲಿ ನಿಗದಿಪಡಿಸಿರುವ ಅಪೆಂಡಿಕ್ಸ್ (2)ರಲ್ಲಿ ಸೂಚಿಸಿರುವಂತೆ ಬೋಧನಾ ಕೊಠಡಿಗಳು, ಪ್ರಯೋಗಾಲಯಗಳು, ಶೌಚಾಲಯ ಇತ್ಯಾದಿಗಳನ್ನು ಒಳಗೊಂಡ ಮೂಲಭೂತ ಸೌಕರ್ಯಗಳನ್ನು ಸಂಸ್ಥೆಯು ಒದಗಿಸಿರತಕ್ಕದ್ದು.
7. ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದವರು ನಡೆಸುತ್ತಿರುವ ಕಾಲೇಜುಗಳನ್ನು ವೇತನಾನುದಾನಕ್ಕೆ ಒಳಪಡಿಸುವ ಸಂಧರ್ಭದಲ್ಲಿ ಅಂತಹ ಕಾಲೇಜುಗಳಲ್ಲಿ ಒಟ್ಟು ವಿದ್ಯಾರ್ಥಿಗಳ ಸಂಖ್ಯೆಯಲ್ಲಿ ಪರಿಶಿಷ್ಠ ಜಾತಿ ಮತ್ತು ಪರಿಶಿಷ್ಠ ಪಂಗಡದ ವಿದ್ಯಾರ್ಥಿಗಳು ಕನಿಷ್ಠ ಶೇಕಡಾ 35 ರಷ್ಟು ಇರತಕ್ಕದ್ದು. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
8. ವಿಶ್ವ ವಿದ್ಯಾಲಯದವರು ನಿಗದಿಪಡಿಸಿರುವ ಸರಾಸರಿ ಪ್ರವೇಶಾತಿಗೆ ಸಮಾನಾಂತರವಾಗಿ ಈ ಕಾಲೇಜುಗಳು ಕನಿಷ್ಠ ಪ್ರವೇಶಾತಿಯನ್ನು ಮಾಡಿಕೊಳ್ಳತಕ್ಕದ್ದು ಮತ್ತು ಪ್ರವೇಶಾತಿ (enrollment) ಪಡೆದ ಕಾಲೇಜಿನ ವಿದ್ಯಾರ್ಥಿಗಳ ಪೈಕಿ ಕನಿಷ್ಠ ಶೇಕಡ 75ರಷ್ಟು ವಿದ್ಯಾರ್ಥಿಗಳು ಪರೀಕ್ಷೆಗೆ ಕುಳಿತುಕೊಳ್ಳುವಂತೆ ಕ್ರಮವಹಿಸತಕ್ಕದ್ದು. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
9. ಇಂತಹ ಕಾಲೇಜುಗಳಲ್ಲಿನ ಪರೀಕ್ಷಾ ಫಲಿತಾಂಶಗಳು ಸಂಬಂಧಪಟ್ಟ ವಿಶ್ವವಿದ್ಯಾಲಯದ ಮಾನ್ಯತೆ ಪಡೆದ ಇತರೆ ಕಾಲೇಜುಗಳಲ್ಲಿನ ಸರಾಸರಿ ಫಲಿತಾಂಶಕ್ಕಿಂತ ಕಡಿಮೆ ಇರತಕ್ಕದ್ದಲ್ಲ. ತಪ್ಪಿದ್ದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.
10. ಈ ರೀತಿ ಸಕ್ಷಮ ಪ್ರಾಧಿಕಾರದಿಂದ ಅನುಮತಿ ಪಡೆದು ಪ್ರಾರಂಭವಾದ ಪದವಿ ಕಾಲೇಜಗಳನ್ನು ಮಧ್ಯದಲ್ಲಿ ಯಾವುದೇ ವಿಚ್ಛಿನ್ನತೆ ಇಲ್ಲದೆ ಸತತವಾಗಿ ನಡೆಸಿರಬೇಕು. ವಿಚ್ಛಿನ್ನತೆ ಉಂಟಾದಲ್ಲಿ ವೇತನಾನುದಾನ ಹಿಂಪಡೆಯುವ ಷರತ್ತಿಗೊಳಪಟ್ಟಿದೆ.

11. ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಮತ್ತು ಇತರ ಸಂಬಂಧಿತ ನಿಯಮಗಳಡಿಯಲ್ಲಿ ನಿಗದಿಪಡಿಸಿರುವಂತೆ ಮಾದರಿ ಸಿಬ್ಬಂದಿಯನ್ವಯ ನೇಮಕಾತಿ ಮಾಡಿಕೊಳ್ಳತಕ್ಕದ್ದು. ಪ್ರತಿಯೊಂದು ತರಗತಿಯಲ್ಲಿ ನಿಗಧಿತ ಕನಿಷ್ಠ ಮಟ್ಟದ ವಿದ್ಯಾರ್ಥಿ ಹಾಜರಾತಿ ಸಂಖ್ಯಾಬಲವನ್ನು ಹೊಂದಿರತಕ್ಕದ್ದು. ಪದವಿ ಕಾಲೇಜುಗಳಿಗೆ ಸಂಬಂಧಪಟ್ಟಂತೆ ಪ್ರತಿಯೊಂದು ತರಗತಿಯಲ್ಲಿ ಕನಿಷ್ಠ 40 ವಿದ್ಯಾರ್ಥಿಗಳ ಹಾಜರಾತಿ ಕಡ್ಡಾಯವಾಗಿರಬೇಕು. ಭಾಷಾ ವಿಷಯದಲ್ಲಿ ಕನಿಷ್ಠ 10 ವಿದ್ಯಾರ್ಥಿಗಳು ಹಾಗೂ ಐಚ್ಛಿಕ ವಿಷಯಗಳಿಗೆ ಕನಿಷ್ಠ 15 ವಿದ್ಯಾರ್ಥಿಗಳ ಸಂಖ್ಯೆ ಇರಬೇಕು.
12. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿ ಪಡೆಯದೇ ಮಾಡತಕ್ಕದ್ದಲ್ಲ.
13. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರದ ನಿಯಮಗಳು/ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
14. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಪೂರ್ವಾನುಮತಿ ಪಡೆಯುವುದು ಮತ್ತು ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
15. ಅನುಮೋದಿತ ಹುದ್ದೆಗಳಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ಸರ್ಕಾರದ ಮತ್ತು ಯುಜಿಸಿ ನಿಯಮಗಳ ಪ್ರಕಾರ ವಯೋಮಿತಿ/ ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸಿರುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.
16. ಸದರಿ ಕಾಲೇಜಿನಲ್ಲಿ ವೇತನಾನುದಾನಕ್ಕೆ ಒಳಪಡಿಸಲಾಗಿರುವಂತಹ ಬೋಧಕರ ವೇತನವನ್ನು ಪ್ರಥಮ 5 ವರ್ಷಗಳ ಅವಧಿಗೆ ಇಲಾಖೆಗೆ ನಿಗದಿ ಪಡಿಸಲಾದ ಯೋಜನೆ ಹಂಚಿಕೆಯಲ್ಲಿಯೇ ವೆಚ್ಚ ಭರಿಸತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ: 860/ವೆಚ್ಚ-8/2010, ದಿನಾಂಕ: 28-06-2011 ಮತ್ತು ಆಇ: 956/ವೆಚ್ಚ-8/2010, ದಿನಾಂಕ: 02-07-2011 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 537

**ಯು.ಬಿ. ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ. (ಕಾಲೇಜು ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ :** ಡಾ: ಶ್ರೀಧರ ನ್ಯಾಕ್. ಬಿ., ಇತಿಹಾಸ ಉಪನ್ಯಾಸಕರು, ವಿವೇಕಾನಂದ ಮಹಾವಿದ್ಯಾಲಯ, ನೆಹರುನಗರ, ಪುತ್ತೂರು ಇವರ ಸೇವಾ ಸಕ್ರಮಾತಿ ಬಗ್ಗೆ.

**ಓದಲಾಗಿದೆ :** 1. ಕಾಲೇಜು ಶಿಕ್ಷಣ ಆಯುಕ್ತರ ಪತ್ರ ಸಂಖ್ಯೆ: ಕಾಶಿಇ:75:ಸೇಸ:2009-10: ಪಿಸಿಸಿ-3, ದಿನಾಂಕ: 20-04-2010.

**ಪ್ರಸ್ತಾವನೆ :**

ಮೇಲೆ ಕ್ರಮಾಂಕ(1) ರಲ್ಲಿ ಓದಲಾದ ದಿನಾಂಕ: 20-04-2010ರ ಪ್ರಸ್ತಾವನೆಯಲ್ಲಿ ಶ್ರೀ ವೆಂಕಟ್ರಮಣ ಭಟ್ ಆರ್ತಿಕಜೆ, ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು, ವಿವೇಕಾನಂದ ಮಹಾವಿದ್ಯಾಲಯ, ನೆಹರುನಗರ, ಪುತ್ತೂರು ಇವರು ದಿನಾಂಕ: 30-06-2001 ರಂದು ವಯೋನಿವೃತ್ತಿ ಹೊಂದಿರುವ ಖಾಲಿ ಹುದ್ದೆಗೆ ದಿನಾಂಕ:03-07-1996ರಂದು ಇತಿಹಾಸ ಉಪನ್ಯಾಸಕರಾಗಿ ತಾತ್ಕಾಲಿಕವಾಗಿ ಕರ್ತವ್ಯ ನಿರ್ವಹಿಸುತ್ತಿರುವ ಡಾ: ಶ್ರೀಧರ ನ್ಯಾಕ್.ಬಿ. ಇವರು ಸ್ನಾತಕ್ಕೋತ್ತರ ಪದವಿಯಲ್ಲಿ ಪ್ರಥಮ ದರ್ಜೆಯಲ್ಲಿ ತೇರ್ಗಡೆ ಹೊಂದಿದ್ದು, ಪಿ.ಹೆಚ್.ಡಿ ಪದವಿಯನ್ನು ಹೊಂದಿರುತ್ತಾರೆ. ಸದರಿಯವರು ತಮ್ಮ ಸೇವಾ ಸಕ್ರಮಾತಿ ಕುರಿತು ಕರ್ನಾಟಕ ರಾಜ್ಯ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 12339/2001 ಅನ್ನು ದಾಖಲಿಸಿದ್ದು, ಸದರಿ ರಿಟ್ ಅರ್ಜಿಯು ದಿನಾಂಕ: 16-07-2011 ರಂದು ವಿಲೇಯಾಗುತ್ತಾ, ಡಾ: ಶ್ರೀಧರ ನ್ಯಾಕ್.ಬಿ. ಇವರನ್ನು ಸದರಿ ಕಾಲೇಜಿನ ಸೇವೆಯಿಂದ ಬಿಡುಗಡೆಗೊಳಿಸಬಾರದೆಂದು ಹಾಗೂ ಸದರಿಯವರ ಸೇವಾ ಸಕ್ರಮಾತಿಗೆ ಅಗತ್ಯ ಕ್ರಮ ಕೈಗೊಳ್ಳುವಂತೆ ತೀರ್ಪು ನೀಡಿರುತ್ತದೆ. 2005-06ರಿಂದ 2009-10ನೇ ಸಾಲಿನ ಕಾರ್ಯಭಾರ ಪಟ್ಟಿಯಲ್ಲಿ ಯುಜಿಸಿ ನಿಯಮಾವಳಿ ಪ್ರಕಾರ 44 ಗಂಟೆಗಳ ಕಾರ್ಯಭಾರವಿರುವುದಾಗಿ, ಕರ್ನಾಟಕ ಶಿಕ್ಷಣ ಸಂಸ್ಥೆಗಳು (ಕಾಲೇಜು ಶಿಕ್ಷಣ) ನಿಯಮಗಳು 2003ರ ಪ್ರಕಾರ ಖಾಸಗಿ ಕಾಲೇಜಿನ ಬೋಧಕ ಹುದ್ದೆಗಳನ್ನು ನೇಮಕಾತಿ ಮಾಡಿಕೊಳ್ಳಲು ಹಾಗೂ ಸೇವಾ ಸಕ್ರಮಾತಿಗೊಳಿಸಲು ಅವಕಾಶ ಕಲ್ಪಿಸಲಾಗಿದೆ. ಆದುದರಿಂದ, ಸಾಮಾನ್ಯ ವರ್ಗಕ್ಕೆ ಸೇರಿದ ಡಾ: ಶ್ರೀಧರ ನ್ಯಾಕ್.ಬಿ. ಇವರಿಗೆ 16 ಗಂಟೆಗಳ ಕಾರ್ಯಭಾರದೊಂದಿಗೆ ಸೇವಾ ಸಕ್ರಮಾತಿಗೊಳಿಸಿ ಇತಿಹಾಸ ವಿಭಾಗದಲ್ಲಿ ಖಾಲಿ ಇರುವ ಹಾಗೂ ಪರಿಶಿಷ್ಠ ಜಾತಿಗೆ ಮೀಸಲಿರಿಸಿರುವ ಉಪನ್ಯಾಸಕರ ಹುದ್ದೆಗೆ ಪರಿಗಣಿಸಿ ಅದೇ ಕಾಲೇಜಿನಲ್ಲಿ ಪ್ರಾಣಿಶಾಸ್ತ್ರ ವಿಭಾಗದಲ್ಲಿ ಖಾಲಿ ಇರುವ ಹಾಗೂ ಸಾಮಾನ್ಯ ವರ್ಗಕ್ಕೆ ಮೀಸಲಿರಿಸಿದ ಹುದ್ದೆಯನ್ನು ಪರಿಶಿಷ್ಠ ಜಾತಿ ಅಭ್ಯರ್ಥಿಯಿಂದ ತುಂಬುವ ಷರತ್ತಿಗೊಳಪಟ್ಟು, ಪರಿಷ್ಕೃತ ಯುಜಿಸಿ ಮಾರ್ಗಸೂಚಿಗಳನ್ವಯ ಉಪನ್ಯಾಸಕರ ಹುದ್ದೆಗೆ ನಿಗದಿ ಪಡಿಸಿರುವ ವಿದ್ಯಾರ್ಹತೆ ಹೊಂದಿರುವ ಡಾ: ಶ್ರೀಧರ ನ್ಯಾಕ್.ಬಿ., ಇತಿಹಾಸ ಉಪನ್ಯಾಸಕರು ಇವರನ್ನು ಯುಜಿಸಿ ವೇತನ ಶ್ರೇಣಿಯಡಿ ಸೇವಾ ಸಕ್ರಮಾತಿಗೊಳಿಸಲು ತೀರ್ಮಾನ ಕೈಗೊಳ್ಳಲಾಗಿರುವ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 70 ಯುಪಿಸಿ 2012 ಬೆಂಗಳೂರು ದಿನಾಂಕ : 8-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಡಾ: ಶ್ರೀಧರ ನ್ಯಾಕ್.ಬಿ., ಇತಿಹಾಸ ಉಪನ್ಯಾಸಕರು, ವಿವೇಕಾನಂದ ಮಹಾವಿದ್ಯಾಲಯ, ನೆಹರುನಗರ, ಪುತ್ತೂರು ಇವರನ್ನು ಇತಿಹಾಸ ವಿಭಾಗದಲ್ಲಿ ಖಾಲಿ ಇರುವ ಹಾಗೂ ಪರಿಶಿಷ್ಠ ಜಾತಿಗೆ ಮೀಸಲಿರಿಸಿರುವ

ಉಪನ್ಯಾಸಕರ ಹುದ್ದೆಗೆ ಪರಿಗಣಿಸಿ ಅದೇ ಕಾಲೇಜಿನಲ್ಲಿ ಪ್ರಾಣಿಶಾಸ್ತ್ರ ವಿಭಾಗದಲ್ಲಿ ಖಾಲಿ ಇರುವ ಹಾಗೂ ಸಾಮಾನ್ಯ ವರ್ಗಕ್ಕೆ ಮೀಸಲಿರಿಸಿದ ಹುದ್ದೆಯನ್ನು ಪರಿಶಿಷ್ಠ ಜಾತಿ ಅಭ್ಯರ್ಥಿಯಿಂದ ತುಂಬುವ ಷರತ್ತಿಗೊಳಪಟ್ಟು ಆದೇಶ ಹೊರಡಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕೆಳಕಂಡ ಷರತ್ತುಗಳಿಗೊಳಪಡಿಸಿ ವೇತನಾನುದಾನಕ್ಕೆ ಒಳಪಡಿಸಿ ಆದೇಶಿಸಲಾಗಿದೆ.

| ಕ್ರಮ ಸಂಖ್ಯೆ | ಉಪನ್ಯಾಸಕರ ಹೆಸರು | ಖಾಲಿ ಹುದ್ದೆ ವಿವರ | ನೇಮಕಾತಿ ದಿನಾಂಕ | ಅನುದಾನಕ್ಕೆ ಒಳಪಟ್ಟಿರುವ ವಿಷಯ | ಖಾಲಿ ಹುದ್ದೆಯ ಕಾಲೇಜಿನ ಹೆಸರು |
|---|---|---|---|---|---|
| 1 | ಡಾ: ಶ್ರೀಧರ ನ್ಯಾಕ್.ಬಿ. ಇತಿಹಾಸ ಉಪನ್ಯಾಸಕರು | ಶ್ರೀ ವೆಂಕಟ್ರಮಣ ಭಟ್ ಆರ್ತಿಕಜೆ, ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು ದಿನಾಂಕ: 30–06–2001 ರಂದು ಇವರ ವಯೋನಿವೃತ್ತಿಯಿಂದ ತೆರವಾದ ಹುದ್ದೆ. | 03–07–1996 | ಇತಿಹಾಸ | ವಿವೇಕಾನಂದ ಮಹಾವಿದ್ಯಾಲಯ, ನೆಹರುನಗರ, ಪುತ್ತೂರು |

ಈ ಸಂಬಂಧ ಉಂಟಾಗುವ ವೇತನ ವೆಚ್ಚವನ್ನು ಪ್ರಸಕ್ತ ಆರ್ಥಿಕ ವರ್ಷದಲ್ಲಿ ಇಲಾಖೆಗೆ ಒದಗಿಸಿರುವ ಆಯವ್ಯಯ ಹಂಚಿಕೆಯಲ್ಲಿ ಭರಿಸಿಕೊಳ್ಳಲು ಆದೇಶಿಸಿದೆ.

1. ಆದೇಶ ಸಂಖ್ಯೆ: ಇಡಿ 146 ಯುಪಿಸಿ 1979, ದಿನಾಂಕ: 03–10–1981 ಮತ್ತು ಈ ನಿಟ್ಟಿನಲ್ಲಿ ಆಗಿಂದಾಗ್ಗೆ ಹೊರಡಿಸಿರುವ ತಿದ್ದುಪಡಿ ಹಾಗೂ ಸ್ಪಷ್ಟೀಕರಣಗಳಿಗೆ ನಿಗದಿಪಡಿಸಿದ ಕಾರ್ಯಭಾರವನ್ನು ಹೊಂದಿರತಕ್ಕದ್ದು, ಅಲ್ಲದೆ ಮುಂದೆ ಸರ್ಕಾರ ವಿಧಿಸಬಹುದಾದ ಯಾವುದೇ ಷರತ್ತಿಗೊಳಪಟ್ಟಿರತಕ್ಕದ್ದು.
2. ಇನ್ನು ಮುಂದೆ ಭವಿಷ್ಯಾನುಸಾರ ಭರ್ತಿ ಮಾಡಬೇಕಾಗಿರುವ ಹುದ್ದೆಗಳಿಗೆ ಸಕ್ಷಮ ಅಧಿಕಾರಿಯಿಂದ ಪೂರ್ವಾನುಮತಿಯನ್ನು ಪಡೆಯತಕ್ಕದ್ದು.
3. ನೇರ ನೇಮಕಾತಿ, ಬಡ್ತಿ ಮತ್ತು ವಿದ್ಯಾರ್ಥಿಗಳ ಪ್ರವೇಶದ ವಿಷಯದಲ್ಲಿ ಕಾಲಕಾಲಕ್ಕೆ ಹೊರಡಿಸುವ ಸರ್ಕಾರಿ ಆದೇಶಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
4. ಪ್ರವೇಶಾವಕಾಶದಲ್ಲಿ ನಿಗದಿಪಡಿಸಿರುವ ವಿದ್ಯಾರ್ಥಿಗಳ ಕನಿಷ್ಠ ಪ್ರಮಾಣವನ್ನು ವಿವರವಾಗಿ ಅನುಸರಿಸತಕ್ಕದ್ದು.
5. ಮುಂದೆ ಉದ್ಭವಿಸುವ ಹುದ್ದೆಗಳನ್ನು ಬ್ಯಾಕ್ ಲಾಗ್ ರಿಕ್ತಸ್ಥಾನಗಳೆಂದು ಪರಿಗಣಿಸಿ ಅವುಗಳನ್ನು ಪರಿಶಿಷ್ಟ ಜಾತಿ: ಪರಿಶಿಷ್ಟ ಪಂಗಡ ಮೀಸಲಾತಿಯ ಅನುಪಾತದನ್ವಯ ರಿಕ್ತಸ್ಥಾನ ತುಂಬುವವರೆಗೆ ಮುಂದುವರೆಸಿ ನೇಮಕಾತಿ ಮಾಡತಕ್ಕದ್ದು ಮತ್ತು ಈ ದಿಸೆಯಲ್ಲಿ ಸರ್ಕಾರವು ಆಗಿಂದಾಗ್ಗೆ ಹೊರಡಿಸುವ ಆದೇಶಗಳನ್ನು ಪಾಲಿಸತಕ್ಕದ್ದು.
6. ಸದರಿ ಕಾಲೇಜಿನಲ್ಲಿ ಇನ್ನು ಮುಂದೆ ನೌಕರರ ರಾಜೀನಾಮೆ, ನಿವೃತ್ತಿ ಮತ್ತು ನಿಧನದಿಂದ ತೆರವಾದ ಬೋಧಕ ಹುದ್ದೆಗಳನ್ನು ತುಂಬುವಾಗ ಸರ್ಕಾರದ ಮೀಸಲಾತಿ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.
7. ಈ ಉಪನ್ಯಾಸಕರ ನೇಮಕಾತಿ ಹೊಂದಿದ ದಿನಾಂಕದಂದು ಹಾಗೂ ತದನಂತರ ಹೊಂದಿರುವ ವಿದ್ಯಾರ್ಹತೆಯನ್ವಯ ಇವರುಗಳಿಗೆ ವೇತನ ಶ್ರೇಣಿಯನ್ನು ನಿಗದಿಪಡಿಸತಕ್ಕದ್ದು.
8. ಸದರಿ ಉಪನ್ಯಾಸಕರಿಗೆ ವೇತನಾನುದಾನ ಬಿಡುಗಡೆ ಮಾಡುವ ಮುನ್ನ ನಿಯಮಗಳ ಪ್ರಕಾರ ವಯೋಮಿತಿ: ವಿದ್ಯಾರ್ಹತೆ ಮತ್ತಿತರ ಷರತ್ತುಗಳನ್ನು ಪೂರೈಸುವ ಬಗ್ಗೆ ಖಚಿತಪಡಿಸಿಕೊಳ್ಳತಕ್ಕದ್ದು.

ಪ್ರತೀ ವರ್ಷವೂ ಮೇಲ್ಕಂಡ ಷರತ್ತುಗಳನ್ನು ಪೂರೈಸಿರುವ ಕುರಿತು ಸಂಬಂಧಪಟ್ಟ ಜಂಟಿ ನಿರ್ದೇಶಕರು ದೃಢೀಕರಿಸಿದ ನಂತರವೇ ಆಯಾ ವರ್ಷದ ವೇತನಾನುದಾನ ಬಿಡುಗಡೆ ಮಾಡುವಂತೆ ಆಯುಕ್ತಾಲಯಕ್ಕೆ ಸೂಚಿಸಲಾಗಿದೆ. ನ್ಯೂನ್ಯತೆಗಳಾದಲ್ಲಿ ಸಂಬಂಧಪಟ್ಟ ಜಂಟಿ ನಿರ್ದೇಶಕರೇ ಜವಾಬ್ದಾರರಾಗಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಯು.ಬಿ.ಉಳವಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 538 ಶಿಕ್ಷಣ ಇಲಾಖೆ. (ಕಾಲೇಜು ಶಿಕ್ಷಣ)

## ಶಿಕ್ಷಣ ಸಚಿವಾಲಯ

**ವಿಷಯ :** ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ, ಗುಲ್ಬರ್ಗಾ ಜಿಲ್ಲೆ, ಇವರ ಮೇಲಿನ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**

1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)–11/ಸಿಆರ್ 3/2011, ಗುಲ್ಬರ್ಗಾ, ದಿ:02.12.2011.
2) ತನಿಖಾಧಿಕಾರಿಯವರ ಅಂತಿಮ ವರದಿ ದಿ: 26.09.2011.
3) ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ಪತ್ರ, ಪ್ರಾಯೋಗಿಕ ಪಂಚನಾಮೆ, ಹಣ ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ದಾಖಲೆಗಳು.

**ಪ್ರಸ್ತಾವನೆ :**

ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ದ ಗುನ್ನೆ ಸಂಖ್ಯೆ: 03/2011ರಲ್ಲಿ ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಗುಲ್ಬರ್ಗಾ, ಲೋಕಾಯುಕ್ತ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಮೇಲೆ ಓದಲಾದ-2, 3) ಅಪರ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ದಿನಾಂಕ: 02.12.2011 (ಮೇಲೆ ಓದಲಾದ-1) ರೊಡನೆ ಕಳುಹಿಸುತ್ತಾ, ಆಪಾದಿತರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ 1988ರ ಕಲಂ 19(1)(ಬಿ)ರ ಅನ್ವಯ ಮಂಜೂರಾತಿಗಾಗಿ ಸರ್ಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಜಿ-11/ಸಿಆರ್ 3/2011, ಗುಲ್ಬರ್ಗಾ, ದಿ:02.12.2011, ರೊಂದಿಗೆ ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಪರಿಶೀಲಿಸಿದೆ.

1) ಶ್ರೀ ಸುರೇಶ ತಂದೆ ನಿಂಗಪ್ಪ ಕಟ್ಟಿಮನಿ, ವಯಸ್ಸು 41 ವರ್ಷ, ಮುಖ್ಯೋಪಾಧ್ಯಾಯರು, ಸರ್ಕಾರಿ ಪ್ರಾಥಮಿಕ ಶಾಲೆ, ಪಡಗದ ಹಳ್ಳಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ ಇವರ ಫಿರ್ಯಾದು ದಿನಾಂಕ: 10.03.2011.
2) ಪ್ರಥಮ ವರ್ತಮಾನ ವರದಿ, ಗುಲ್ಬರ್ಗಾ, ಲೋಕಾಯುಕ್ತ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 03/2011.
3) ಪ್ರಾಯೋಗಿಕ ಪಂಚನಾಮೆ (ಎಂಟ್ರಸ್ಟ್‌ಮೆಂಟ್ ಮಹಜರ್) ದಿನಾಂಕ: 11.03.2011.
4) ಹಣ ಜಪ್ತಿ ಪಂಚನಾಮೆ (ಟ್ರ್ಯಾಪ್ ಮಹಜರ್) ದಿನಾಂಕ: 11.03.2011.
5) ರಾಸಾಯನಿಕ ಪರೀಕ್ಷಕರ ವಿಶ್ಲೇಷಣಾ ವರದಿ ಪತ್ರ ನಂ. ಪಿಹೆಚ್‌ಐ/ಸಿಎಂಇ/ಎಲ್‌ಒಕೆ/232/10-11, ದಿನಾಂಕ: 26.03.2011.
6) ಕೃತ್ಯ ನಡೆದ ಸ್ಥಳದ ನಕಾಶೆ.
7) <u>ಸಾಕ್ಷಿಗಳ ಹೇಳಿಕೆಗಳು:</u>
   1. ಶ್ರೀ ಸುರೇಶ ತಂದೆ ನಿಂಗಪ್ಪ ಕಟ್ಟಿಮನಿ, ವಯಸ್ಸು 41 ವರ್ಷ, ಮುಖ್ಯೋಪಾಧ್ಯಾಯರು, ಸರ್ಕಾರಿ ಪ್ರಾಥಮಿಕ ಶಾಲೆ, ಪಡಗದ ಹಳ್ಳಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. (ಫಿರ್ಯಾದಿ)
   2. ಶ್ರೀ ಮುಕ್ತಾರ ಅಹ್ಮದ ಅಲಿ ಖಾನ್ ತಂದೆ ಅಬ್ದುಲ್ ಗಫಾರ್ ಖಾನ್, 56 ವರ್ಷ, ಸಿ.ಟಿ.ಓ. (ವಾಣಿಜ್ಯ ತೆರಿಗೆ ಅಧಿಕಾರಿ), ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರ (ಆಡಳಿತ) ಕಛೇರಿ ಡಿ.ಎಮ್.ವಿಂಗ್, ಗುಲ್ಬರ್ಗಾ, ಪಂಚ-1.
   3. ವಿಜಯಕುಮಾರ ತಂದೆ ಚಂದ್ರಶೇಖರ, 46 ವರ್ಷ, ಬೆರಳಚ್ಚುಗಾರರು, (ವಾಣಿಜ್ಯ ತೆರಿಗೆ ಅಧಿಕಾರಿ), ವಾಣಿಜ್ಯ ತೆರಿಗೆಗಳ ಜಂಟಿ ಆಯುಕ್ತರ (ಆಡಳಿತ) ಕಛೇರಿ, ಗುಲ್ಬರ್ಗಾ, ಪಂಚ-2.
   4. ಶ್ರೀ ಶಂಕ್ರಪ್ಪ ತಂದೆ ಸಿದ್ದಪ್ಪ ಮಿಣಜಗಿ, 58 ವರ್ಷ, ಅಧೀಕ್ಷಕರು, ಬಿ.ಇ.ಓ. ಕಛೇರಿ, ಜೇವರ್ಗಿ.
   5. ಶ್ರೀ ನಾಗಯ್ಯ ತಂದೆ ನೀಲಕಂಠಯ್ಯ ಹಿರೇಮಠ, 41 ವರ್ಷ, ದ್ವಿ.ದ.ಸ., ಬಿ.ಇ.ಓ ಕಛೇರಿ, ಜೇವರ್ಗಿ.
   6. ಶ್ರೀ ವೀರೇಂದ್ರ ತಂದೆ ಶರಣಗೌಡ ಪಾಟೀಲ್, 45 ವರ್ಷ, ಪ್ರ.ದ.ಸ., ಬಿ.ಇ.ಓ ಕಛೇರಿ, ಜೇವರ್ಗಿ.
   7. ಶ್ರೀ ಸಂಗಣ್ಣ ತಂದೆ ಮಲ್ಲೇಶಪ್ಪ ಚೌದರಿ, 50 ವರ್ಷ, ತಾಲ್ಲೂಕು ದೈಹಿಕ ಶಿಕ್ಷಣ ಪರಿವೀಕ್ಷಕರು, ಬಿ.ಇ.ಓ.ಕಛೇರಿ, ಜೇವರ್ಗಿ..
   8. ಶ್ರೀ ನಾಗನಾಥ ತಂದೆ ಹಣವಂತರಾವ ಬಸುದೆ, 42 ವರ್ಷ, ದ್ವಿ.ದ.ಸ., ಬಿ.ಇ.ಓ ಕಛೇರಿ, ಜೇವರ್ಗಿ.
   9. ಶ್ರೀ ಗುರುಪಾದಯ್ಯ ತಂದೆ ಸಿದ್ರಾಮಯ್ಯ ಸಾಲಿಮಠ, 38 ವರ್ಷ, ದ್ವಿ.ದ.ಸ., ಬಿ.ಇ.ಓ ಕಛೇರಿ, ಜೇವರ್ಗಿ.
   10. ಶ್ರೀ ಸಿದ್ದಪ್ಪ ತಂದೆ ರಾಮಣ್ಣ ಸಿಂಗೆ, 53 ವರ್ಷ, ಮುಖ್ಯ ಗುರುಗಳು, ಸರ್ಕಾರಿ ಮಾದರಿ ಪ್ರಾಥಮಿಕ ಶಾಲೆ, ಹರವಾಳ, ಜೇವರ್ಗಿ ತಾಲ್ಲೂಕು.
   11. ಶ್ರೀ ಶರಣಬಸವ ತಂದೆ ಶಾಂತಪ್ಪ ಬಿರಾದಾರ, 36 ವರ್ಷ, ಸಹಾಯಕ ಶಿಕ್ಷಕರು, ಸರ್ಕಾರಿ ಕಿರಿಯ ಪ್ರಾಥಮಿಕ ಶಾಲೆ, ಪಡಗದ ಹಳ್ಳಿ.
   12. ಶ್ರೀ ರುದ್ರಗೌಡ ತಂದೆ ಮಲ್ಲನಗೌಡ ಪಾಟೀಲ್, 46 ವರ್ಷ, ಕ್ಷೇತ್ರ ಸಮನ್ವಯಾಧಿಕಾರಿಗಳು, ಕ್ಷೇತ್ರ ಸಂಪನ್ಮೂಲ ಕೇಂದ್ರ, ಜೇವರ್ಗಿ.
   13. ಶ್ರೀ ಚಿಂತನಗೌಡ ತಂದೆ ಗುರಣ್ಣಗೌಡ ಪಾಟೀಲ್, 43 ವರ್ಷ, ಸಮೂಹ ಸಂಪನ್ಮೂಲ ವ್ಯಕ್ತಿಗಳು, ಬಿಳ್ವಾರ, ಜೇವರ್ಗಿ ತಾಲ್ಲೂಕು.
   14. ಶ್ರೀ ಚಂದ್ರಶೇಖರ ತಂದೆ ಭೀಮಣ್ಣ ಕಾನವಿ, 57 ವರ್ಷ, ವ್ಯವಸ್ಥಾಪಕರು, ಬಿ.ಇ.ಓ ಕಛೇರಿ, ಜೇವರ್ಗಿ.
   15. ಶ್ರೀ ಪರಮೇಶ, ಉಪ ನಿರ್ದೇಶಕರು, ಸಾ.ಶಿ.ಇ., ಗುಲ್ಬರ್ಗಾ.
   16. ಶ್ರೀ ಶಾಂತಪ್ಪ ತಂದೆ ಶಂಕರ ಜಾಧವ, 41 ವರ್ಷ, ಕಿರಿಯ ಅಭಿಯಂತರರು, ಲೋಕೋಪಯೋಗಿ ಇಲಾಖೆ, ಜೇವರ್ಗಿ ಉಪ ವಿಭಾಗ.
   17. ಶ್ರೀ ಶಿವಪ್ಪ, ಹೆಚ್.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬಾರ್ಗಾ.
   18. ಶ್ರೀ ಲಿಂಗಣ್ಣಾ ಹೆಚ್.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ. ಗುಲ್ಬರ್ಗಾ.
   19. ಶ್ರೀ ಅಶೋಕಕುಮಾರ, ಪಿ.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ. ಗುಲ್ಬರ್ಗಾ.
   20. ಶ್ರೀ ಶ್ರೀನಿವಾಸ ರೆಡ್ಡಿ, ಪಿ.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ.
   21. ಶ್ರೀ ಅನಿಲಕುಮಾರ, ಪಿ.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ.
   22. ಶ್ರೀ ಪ್ರಲ್ಹಾದ ಕುಲಕರ್ಣಿ, ಪಿ.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ.
   23. ಶ್ರೀ ಪಾಂಡುರಂಗ, ಪಿ.ಸಿ., ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ.
   24. ಶ್ರೀ ಮಹೇಶ್ವರಗೌಡ, ಎಸ್.ಯು.ಪಿ.ಐ., ಕರ್ನಾಟಕ ಲೋಕಾಯುಕ್ತ ಠಾಣೆ, ಗುಲ್ಬರ್ಗಾ.
   25. ಶ್ರೀ ಶರಣಯ್ಯ ತಂದೆ ಶಿವಲಿಂಗಯ್ಯಸ್ವಾಮಿ, 44 ವರ್ಷ, ಮುಖ್ಯಾಧಿಕಾರಿಗಳು, ಪುರಸಭೆ, ಜೇವರ್ಗಿ.

8) ಲಂಚ ಕೇಳಲು ಆಧಾರವಾದ ಕಡತ:- ಫಿರ್ಯಾದಿದಾರ ಶ್ರೀ ಸುರೇಶ ತಂದೆ ನಿಂಗಪ್ಪ ಕಟ್ಟಿಮನಿ, ವಯಸ್ಸು 41 ವರ್ಷ, ಮುಖ್ಯೋಪಾಧ್ಯಾಯರು, ಸರ್ಕಾರಿ ಪ್ರಾಥಮಿಕ ಶಾಲೆ, ಪಡಗದ ಹಳ್ಳಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರದಿಂದ 2 ಶಾಲಾ ಕೊಠಡಿಗಳನ್ನು ಕಟ್ಟಲು ರೂ. 4,60,000/-ಗಳು 2006-07 ರಲ್ಲಿ ಮಂಜೂರಾಗಿರುತ್ತದೆ. ಅಷ್ಟರಲ್ಲಿ ಕಾಮಗಾರಿ ಪೂರ್ಣಗೊಳ್ಳುವುದಿಲ್ಲ ಎಂದು ಭಾವಿಸಿ, ಫಿರ್ಯಾದುದಾರರು ಕಾಮಗಾರಿ ಪ್ರಾರಂಭಿಸಿರುವುದಿಲ್ಲ. ನಂತರ ಮೇಲಾಧಿಕಾರಿಗಳ ಸೂಚನೆಯಂತೆ ಮೇ-2009 ರಲ್ಲಿ ಸದರಿ ಕಾಮಗಾರಿಯನ್ನು ಪ್ರಾರಂಭಿಸಿರುತ್ತಾರೆ. ಕಾಮಗಾರಿ ವಿಳಂಬಕ್ಕೆ ಸಂಬಂಧಿಸಿ ಫಿರ್ಯಾದಿದಾರರ 8 ತಿಂಗಳ ವೇತನ ತಡೆಹಿಡಿಯಲಾಗಿರುತ್ತದೆ. ಸದರಿ ತಡೆಹಿಡಿದ ವೇತನವನ್ನು ಬಿಡುಗಡೆ ಮಾಡಲು ಆಪಾದಿತರು ರೂ. 5,000/-ಗಳ ಲಂಚ ಕೇಳಿ ಪಡೆದುಕೊಂಡಾಗ ಟ್ರ್ಯಾಪ್ ಬಲೆಗೆ ಸಿಕ್ಕಿಬಿದ್ದಿದ್ದರ ಆಪಾದನೆ ಬಗ್ಗೆ ತನಿಖೆ ಕೈಗೊಂಡಿರುತ್ತದೆ.

**9) ಆಪಾದಿತರ ಸಮಜಾಯಿಷಿ ಹೇಳಿಕೆ ದಿನಾಂಕ: 11.03.2011:-** ಆರೋಪಿ ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ, ಗುಲ್ಬರ್ಗಾ ಜಿಲ್ಲೆ, ಇವರ ಸ್ವರಕ್ಷಣಾ ಹೇಳಿಕೆ ದಿನಾಂಕ: 11.03.2011ನ್ನು ಪರಿಶೀಲಿಸಲಾಗಿದೆ.

ತನಿಖಾಧಿಕಾರಿಗಳಿಂದ ಶ್ರೀ ವಿನಾಯಕ ಬಡಿಗೇರ, ಪೊಲೀಸ್ ಇನ್ಸ್‌ಪೆಕ್ಟರ್, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಗುಲ್ಬರ್ಗಾ ಇವರು ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಪೊಲೀಸ್, ಗುಲ್ಬರ್ಗಾ ಠಾಣೆಯಲ್ಲಿ ಮೊ. ಸಂಖ್ಯೆ: 03/2011 ರಲ್ಲಿ ಲಂಚ ಪ್ರತಿಬಂಧಕ ಕಾಯ್ದೆ 1988ರ ಕಲಂ-7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿರುತ್ತಾರೆ.

ಆಪಾದಿತ ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ, ಗುಲ್ಬರ್ಗಾ ಜಿಲ್ಲೆ, ಇವರು ಫಿರ್ಯಾಧಿದಾರ ಶ್ರೀ ಸುರೇಶ ತಂದೆ ನಿಂಗಪ್ಪ ಕಟ್ಟಿಮನಿ, ವಯಸ್ಸು 41 ವರ್ಷ, ಮುಖ್ಯೋಪಾಧ್ಯಾಯರು, ಸರ್ಕಾರಿ ಪ್ರಾಥಮಿಕ ಶಾಲೆ, ಪಡಗದ ಹಳ್ಳಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರಿಂದ ಅವರ 8 ತಿಂಗಳ ತಡೆಹಿಡಿಯಲಾದ ವೇತನವನ್ನು ಬಿಡುಗಡೆ ಮಾಡುವ ಸಂಬಂಧ ದಿನಾಂಕ: 11.03.2011 ರಂದು ತಮ್ಮ ಸ್ವಂತಕ್ಕೆ ರೂ. 5,000/- ಗಳನ್ನು ಲಂಚದ ಹಣ ನೀಡುವಂತೆ ಕೇಳಿ ಅಂದೇ ದಿನಾಂಕ: 11.03.2011 ರಂದು ಮಧ್ಯಾಹ್ನ 3-00 ಗಂಟೆಯ ಸುಮಾರಿಗೆ ಜೇವರ್ಗಿ ತಾಲ್ಲೂಕು, ಬಿ.ಇ.ಓ ಕಛೇರಿಯಲ್ಲಿ ಆಪಾದಿತ ಅಧಿಕಾರಿಯು ನೆರಳು ಸಾಕ್ಷಿ ಪಂಚ ನಂ.1 ಶ್ರೀ ಮುಕ್ತಾರ ಅಹ್ಮದ ಅಲಿ ಖಾನ್ ಇವರು ನೋಡುತ್ತಿದ್ದಂತೆ ಫಿರ್ಯಾದಿದಾರ ಶ್ರೀ ಸುರೇಶ ತಂದೆ ನಿಂಗಪ್ಪ ಕಟ್ಟಿಮನಿ, ಇವರಿಂದ ಲಂಚದ ಹಣ ರೂ. 5,000/- ಗಳನ್ನು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ನೆರಳು ಸಾಕ್ಷಿಯು ಅಕ್ರಮ ಸಂಭಾವನೆಯ ಬೇಡಿಕೆ ಮತ್ತು ಪಡೆಯುವಿಕೆಗೆ ಸಂಬಂಧಿಸಿದಂತೆ ಫಿರ್ಯಾದಿ ಹಾಗೂ ಆಪಾದಿತ ಸರ್ಕಾರಿ ನೌಕರರ ನಡುವಿನ ವ್ಯವಹಾರವನ್ನು ಗಮನಿಸಿರುತ್ತಾರೆ ಮತ್ತು ಸಂಭಾಷಣೆಯನ್ನು ಆಲಿಸಿರುತ್ತಾರೆ. ಅಕ್ರಮ ಸಂಭಾವನೆಯಾದ ರೂ. 5000/- ಗಳನ್ನು ಫಿರ್ಯಾದುದಾರರಿಂದ ಒತ್ತಾಯಿಸಿ ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರು ತಮ್ಮ ಕಛೇರಿಯಲ್ಲಿ ಪಡೆದುಕೊಂಡು ಅವರ ಛೇರಿನ ಪಕ್ಕದಲ್ಲಿದ್ದ ಟೀಪಾಯಿ ಮೇಲಿನ ಪೇಪರ್ ಕೆಳಗೆ ಇಟ್ಟುಕೊಂಡಿದ್ದ ಹಣವನ್ನು ವಶಪಡಿಸಿಕೊಳ್ಳಲಾಗಿದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧಕ ಕಾಯ್ದೆ 1988ರ ಕಲಂ-7, 13(1)(ಡಿ) ಜೊತೆಯಲ್ಲಿ ಓದಲಾದ 13(2) ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಅನ್ವಯ ಕಲಂ-7, 13 (1) (ಡಿ) ಜೊತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ವಜಾ ಮಾಡುವ ಅಧಿಕಾರವನ್ನು ಹೊಂದಿದ್ದು, ಲಂಚ ನಿರೋಧಕ ಕಾಯ್ದೆ 1988ರ ಕಲಂ-19(1) (ಬಿ) ರನ್ವಯ ಆಪಾದಿತ ನೌಕರರಾದ ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರನ್ನು ಕಲಂ-7, 13(1)(ಡಿ) ಜತೆಯಲ್ಲಿ ಓದಲಾದ 13(2)ರ ಅಡಿಯಲ್ಲಿ ದಂಡಾರ್ಹ ಅಪರಾಧ ಎಸಗಿರುವುದರಿಂದ ಸದರಿಯವರನ್ನು ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಸರ್ಕಾರದ ಮಂಜೂರಾತಿ ನೀಡಲು ತೀರ್ಮಾನಿಸಿದೆ. ಆದುದರಿಂದ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಇಡಿ 08 ಡಿಜಿಓ 2011 ಬೆಂಗಳೂರು, ದಿನಾಂಕ: 03-02-2012.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಸರ್ಕಾರವು ಆರೋಪಿಯಾದ ಶ್ರೀ ರಾಮಕೃಷ್ಣ ಕುಲಕರ್ಣಿ, ಕ್ಷೇತ್ರ ಶಿಕ್ಷಣಾಧಿಕಾರಿ, ಜೇವರ್ಗಿ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ, ಇವರನ್ನು ಲಂಚ ನಿರೋಧಕ ಕಾಯ್ದೆ 1988ರ ಕಲಂ-7, 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ದೃಢಪಟ್ಟಿರುವುದರಿಂದ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಗಗೊಳಿಸಲು ಸರ್ಕಾರ ಮಂಜೂರಾತಿಯನ್ನು ನೀಡಿ ಆದೇಶಿಸಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ)ನಿಯಮಾವಳಿ 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾಗುವ ಎಲ್ಲಾ ಆದೇಶಗಳನ್ನು ಅಥವಾ ಅಧಿಸೂಚನೆಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕಿರುತ್ತದೆ.

ಅದೇ ನಿಯಮಾವಳಿಯ ನಿಯಮ-19(1)(ಬಿ)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿರುವ ಆದೇಶಗಳು ಮತ್ತು ಅಧಿಸೂಚನೆಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರ ಈ ಮೇಲ್ಕಂಡ ಆದೇಶವನ್ನು ಸರ್ಕಾರದ ಪರವಾಗಿ ಕಛೇರಿಯ ಮೊಹರು ಮತ್ತು ಸರ್ಕಾರದ ಅಧೀನ ಕಾರ್ಯದರ್ಶಿಯ ಸಹಿಯ ಅಡಿಯಲ್ಲಿ ದಿನಾಂಕ: 03.02.2012 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಶಿಕ್ಷಣ ಇಲಾಖೆ. (ಆಡಳಿತ & ಸಮಿತಿಗಳು)

ಪಿ.ಆರ್. 539

## ಉನ್ನತ ಶಿಕ್ಷಣ ಸಚಿವಾಲಯ

ತಿದ್ದುಪಡಿ ಆದೇಶ

**ಸಂಖ್ಯೆ : ಇಡಿ 359 ಯುಬಿವಿ 2011, ಬೆಂಗಳೂರು, ದಿನಾಂಕ:06-02-2012.**

ದಿನಾಂಕ : 12-01-2012 ರಂದು ಹೊರಡಿಸಲಾದ ಸರ್ಕಾರಿ ಆದೇಶ ಸಂಖ್ಯೆ ಇಡಿ 359 ಯುಬಿವಿ 2011 ರ ಆದೇಶ ಭಾಗದ ಕೊನೆಯ ಸಾಲಿನ **"ಮಾನ್ಯ ಲೋಕಾಯುಕ್ತಕ್ಕೆ ವಹಿಸಲಾಗಿದೆ"** ಎಂಬುದರ ಬದಲಿಗೆ **"ಮಾನ್ಯ ಉಪ ಲೋಕಾಯುಕ್ತರಿಗೆ ವಹಿಸಲಾಗಿದೆ"** ಎಂದು ತಿದ್ದಿ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರಕಾಶ್ ರಾವ್ ಕೇಸರ್‌ಕರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಉನ್ನತ ಶಿಕ್ಷಣ ಇಲಾಖೆ ವಿಶ್ವವಿದ್ಯಾಲಯಗಳು

ಪಿ.ಆರ್.540

## ಸಾರಿಗೆ ಸಚಿವಾಲಯ

**ವಿಷಯ :** ಶ್ರೀ ಗಂಗಪ್ಪ ಶಣಶೆಪ್ಪ ಕೇರೂರ, ಹಿರಿಯ ಮೋಟಾರು ವಾಹನ ನಿರೀಕ್ಷಕರು, ಪ್ರಾದೇಶಿಕ ಸಾರಿಗೆ ಕಛೇರಿ ತನಿಖಾ ಠಾಣೆ, ಝಳಕಿ, ಇಂಡಿ ತಾಲ್ಲೂಕು, ಬಿಜಾಪುರ ಜಿಲ್ಲೆ ಇವರ ವಿರುದ್ಧ ದಾಖಲಾಗಿರುವ ಟ್ರ್ಯಾಪ್ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

ಓದಲಾಗಿದೆ:
1) ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಲೋಕ್/ಐಎನ್ ವಿ(ಜಿ) ಎಲ್-47/ಸಿಆರ್-7/2011/ಬಿಜೆಪಿ, ದಿನಾಂಕ: 14-12-2011.
2) ತನಿಖಾಧಿಕಾರಿಯವರ ಅಂತಿಮ ವರದಿ ಪತ್ರ ಸಂಖ್ಯೆ : ಕಲೋ/ಬಿಜೆಪಿ/ಪಿಐ/ಕೊವ/ಸಿಆರ್/ 07/2011/473, ದಿನಾಂಕ : 15-11-2011.
3) ತನಿಖಾ ದಾಖಲೆಗಳ ನಕಲುಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಾ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಶ್ರೀ ಗಂಗಪ್ಪ ಶಣಶೆಪ್ಪ ಕೇರೂರ್, ಹಿರಿಯ ಮೋಟಾರುವಾಹನ ನಿರೀಕ್ಷಕರು (ಪ್ರಸ್ತುತ ಅಮಾನತ್ತಿನಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿ, ಗುಲ್ಬರ್ಗಾ) ಶ್ರೀ ಆನಂದ ವಿ.ಗಾಮನಗಟ್ಟಿ, ಮೋಟಾರು ವಾಹನ ನಿರೀಕ್ಷಕರು, ಶ್ರೀ ಪರಶುರಾಮ ರಾಜಪ್ಪ ಇಲಕಲ್, ಸಿಪಾಯಿ ಎಲ್ಲರೂ ಬಿಜಾಪುರ ಜಿಲ್ಲೆ ಝಳಕಿ ತನಿಖಾ ಠಾಣೆ ಹಾಗೂ ಖಾಸಗಿ ಆರೋಪಿ ಶ್ರೀ ಲಕ್ಷ್ಮಣ ಮಲ್ಲಣ್ಣ ಬಿರಾದಾರ ಇವರುಗಳ ವಿರುದ್ಧ ಗುನ್ನೆ ಸಂಖ್ಯೆ : 7/2011 ರಲ್ಲಿ ಕರ್ನಾಟಕ ಲೋಕಾಯುಕ್ತ, ಬಿಜಾಪುರ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿಯ ನಕಲು ಮತ್ತು ತನಿಖಾ ದಾಖಲಾತಿಗಳನ್ನು (ಉಲ್ಲೇಖ 2) ಮತ್ತು (3) ಅನ್ನು ಅಪರ ಪೊಲೀಸ್ ಮಹಾನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತಮ್ಮ ಪತ್ರ ದಿನಾಂಕ : 14-12-2011 (ಉಲ್ಲೇಖ-1) ರೊಡನೆ ಕಳುಹಿಸಿರುತ್ತಾರೆ. ಮೇಲ್ಕಂಡ ಆಪಾದಿತರುಗಳ ಪೈಕಿ ಅಪಾದಿತರಾದ ಶ್ರೀ ಗಂಗಪ್ಪ ಶಣಶೆಪ್ಪ ಕೇರೂರ, ಹಿರಿಯ ಮೋಟಾರು ವಾಹನ ನಿರೀಕ್ಷಕರು ಇವರನ್ನು ಘನ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಲಂಚ ನಿರೋಧಕ ಕಾಯ್ದೆ-1988ರ 19(1)(ಬಿ)ನೇಯ ಕಲಂನ ಅಡಿಯಲ್ಲಿ ಅಭಿಯೋಜನಾ ಮಂಜೂರಾತಿಗಾಗಿ ಸರ್ಕಾರವನ್ನು ಕೋರಲಾಗಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಉಲ್ಲೇಖ (1) ರ ಜೊತೆಯಲ್ಲಿ ಕಳುಹಿಸಿರುವ ಅಂತಿಮ ತನಿಖಾ ವರದಿಯ ಈ ಕೆಳಕಂಡ ದಾಖಲಾತಿ ಪ್ರತಿಗಳನ್ನು ಪರಿಶೀಲಿಸಿದೆ.

| | |
|---|---|
| 1 | ವಿಜಾಪುರ ಲೋಕಾಯುಕ್ತ ಠಾಣೆ ಅಪರಾಧ ಸಂಖ್ಯೆ : 07/2011 ರಲ್ಲಿಯ ಎಫ್.ಐ.ಆರ್ ನಕಲು ಮತ್ತು ಫಿರ್ಯಾಧಿಯ ನಕಲು |
| 2 | ಪಂಚರುಗಳನ್ನು ಆಹ್ವಾನಿಸಿ ಬರೆದ ಪತ್ರ ಹಾಗೂ ಪಂಚರಿಗೆ ನೀಡಿದ ಹಾಜರಾತಿ ಪ್ರಮಾಣ ಪತ್ರದ ನಕಲುಗಳು ಮತ್ತು ಪಂಚ ನಂ. 1 ನೇದವರ ಕಡೆಯಿಂದ ಸೀಲು ಮುಟ್ಟಿದ ಬಗ್ಗೆ ಪಡೆದುಕೊಂಡ ಪಾವತಿ ಪತ್ರದ ನಕಲು |
| 3 | ವಹಿಸಿಕೊಡುವ ಪಂಚನಾಮದ ನಕಲು |
| 4 | ಟ್ರ್ಯಾಪ ಪಂಚನಾಮದ ನಕಲು |
| 5 | ಟ್ರ್ಯಾಪ ಪಂಚನಾಮ ಕಾಲಕ್ಕೆ ವಶಪಡಿಸಿಕೊಂಡ ಕಾಗದ ಪತ್ರಗಳ ನಕಲುಗಳು ಮತ್ತು ಫಿರ್ಯಾದಿಯ ವಾಹನಕ್ಕೆ ಸಂಬಂಧಪಟ್ಟ ಕಾಗದ ಪತ್ರಗಳು ನಕಲುಗಳು. |
| 6 | ಆಪಾದಿತರು ಬರೆದು ಕೊಟ್ಟ ಹೇಳಿಕೆ ನಕಲುಗಳು |
| 7 | ಗುನ್ನೆ ಜಾಗೆಯ ಹಾತ ನಕಾಶೆ |
| 8 | ಮ್ಯಾಜಿಸ್ಟೇಟ್ ರವರಿಗೆ ಕಳುಹಿಸಿದ ಸ್ವತ್ತಿನ ಪಟ್ಟಿಯ ನಕಲು |
| 9 | ರಿಮ್ಯಾಂಡ್ ಯಾದಿ ಮತ್ತು ದಸ್ತಗಿರಿ ತಿಳುವಳಿಕೆ ಪತ್ರದ ನಕಲು |
| 10 | ಜಾಮೀನು ಅರ್ಜಿಗೆ ಸಲ್ಲಿಸಿದ ತಕರಾರುಗಳು |
| 11 | ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ವಿಜಾಪುರ ಇವರಿಗೆ ಅಪಾದಿತರ ಸೇವಾ ಮಾಹಿತಿ ಕೋರಿ ಬರೆದ ಪತ್ರದ ನಕಲು ಮತ್ತು ಅವರಿಂದ ಬಂದ ಆಪಾದಿತರ ಸೇವಾ ಮಾಹಿತಿಯ ಪತ್ರದ ನಕಲು. |
| 12 | ಪಂಚ ನಂ. 1 ನೇದವರಿಗೆ ಗುನ್ನೆ ಜಾಗಿ ತೋರಿಸುವ ಕುರಿತು ಹಾಜರಾಗಲು ಬರಕೊಂಡ ಪತ್ರದ ನಕಲು ಮತ್ತು ಎ.ಇ.ಇ. ಇಂಡಿ, ರವರಿಗೆ ಕೃತ್ಯ ನಡೆದ ಸ್ಥಳದ ನಕಾಶೆ ತೆಗೆಯಿಸಿ ಕೊಡಲು ಬರೆದ ಪತ್ರದ ನಕಲು ಮತ್ತು ಎ.ಇ.ಇ. ಇಂಡಿ ರವರು ಗುನ್ನೆ ಜಾಗೆಯ ನಕಾಶೆ ತೆಗೆಯಿಸಿ ಕಳುಹಿಸಿದ ಪತ್ರ ಮತ್ತು ಅದರ ಜೊತೆಗೆ ನಕಾಶೆ ನಕಲು. |

| | |
|---|---|
| 13 | ರಾಸಾಯನಿಕ ತಜ್ಞರು ಬೆಂಗಳೂರು ರವರು ನೀಡಿದ ವರದಿ ಮತ್ತು ಅದರ ಜೊತೆಗೆ ಇರುವ ಕಾಗದ ಪತ್ರಗಳು. |
| 14 | ದಿನಾಂಕ : 25–8–2011 ರಂದು ಮಾನ್ಯ ಪ್ರಧಾನ ಜಿಲ್ಲಾ ಹಾಗೂ ವಿಶೇಷ ನ್ಯಾಯಾಲಯದ ವಿಜಾಪುರ ರವರಿಗೆ ಬರೆದುಕೊಂಡ ಪತ್ರ ಹಾಗೂ ಪಂಚರಿಗೆ ಹಾಜರಿರಲು ಬರಕೊಂಡ ಪತ್ರ ಮತ್ತು ಶ್ರೀ ಮುತ್ತುರಾಜ, ಬಿಎನ್. ಪ್ರ.ದ.ಸ., ತನಿಖಾ ಠಾಣೆ ಝಳಕಿ ಇವರಿಗೆ ಬರೆದುಕೊಂಡ ಪತ್ರದ ನಕಲು. |
| 15 | ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ವಿಜಾಪುರ ರವರಿಗೆ ನೀಡಿದ ನೋಟೀಸ್ ನಕಲು |
| 16 | ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ತನಿಖಾ ಠಾಣೆ ಝಳಕಿ ಇವರಿಗೆ ದಿನಾಂಕ : 01–06–2011 ರಿಂದ 30–06–2011ರವರೆಗೆ ತನಿಖಾ ಠಾಣೆಗೆ ನಿಯೋಜನೆಗೊಂಡ ಅಧಿಕಾರಿ ಮತ್ತು ಸಿಬ್ಬಂದಿಯವರ ಹಾಗೂ ದಿನಾಂಕ : 30–06–2011 ರಂದು ಕರ್ತವ್ಯದ ಮೇಲಿದ್ದ ಹೋಮಗಾರ್ಡ್‌ರವರ ಮಾಹಿತಿ ತರುವ ಬಗ್ಗೆ ನೀಡಿದ ನೋಟೀಸ್ ಮತ್ತು ಅವರಿಂದ ಬಂದ ಮಾಹಿತಿಯ ನಕಲುಗಳು. |
| 17 | ಶ್ರೀ ಕುಮಾರ @ ರಾಜಕುಮಾರ ತಂದೆ ವಿಠಲ ಕನಸೆ, ಸಾ: ಕೊಡಗಾನೂರ ತಾ: ಬಸವನ ಬಾಗೇವಾಡಿ (ಫಿರ್ಯಾಧಿ). |
| 18 | ಶ್ರೀ ಮಲ್ಲಿಕಾರ್ಜುನ ತಂದೆ ಶಿವಪ್ಪ ದಾಳಿ, ಪ್ರ.ದ.ಸ, ಉಪ ನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ವಿಜಾಪೂರ (ಪಂಚ ನಂ.1) |
| 19 | ಶ್ರೀ ಬಸವರಾಜ ತಂದೆ ಶಂಕರಗೌಡ ಪಾಟೀಲ, ಕಿರಿಯ ಅಭಿಯಂತರರು, ಅರ್ಬನ್ ಡೆವಲಪ್‌ಮೆಂಟ್ ಅಥಾರಿಟಿ, ವಿಜಾಪುರ (ಪಂಚ ನಂ.2). |
| 20 | ಶ್ರೀ ಶೈಲ ಬಸಪ್ಪ ಉಪ್ಪಿನ, ಸಾ: ಹೊನವಾಡ ತಾ: ಜಿ:ವಿಜಾಪುರ. |
| 21 | ಶ್ರೀ ಚಂದ್ರಕಾಂತ್ ತಂದೆ ಕಲ್ಲಪ್ಪ ಬಿಂದಗೆ, ಸಾ:ಬಳ್ಳೊಳ್ಳಿ ತಾ: ಇಂಡಿ |
| 22 | ಶ್ರೀ ಭೀಮರಾಯ ತಂದೆ ಬಾಪುರಾವ ಕಂಬಾರ, ಸಾ: ಝಳಕಿ ತಾ: ಇಂಡಿ. |
| 23 | ಶ್ರೀ ವಿಠಲ ತಂದೆ ಅಂದಪ್ಪ ಅಗಸರ, ಸಾ:ಝಳಕಿ ತಾ: ಇಂಡಿ. |
| 24 | ಶ್ರೀ ಶಶಿಧರ ತಂದೆ ಶಿಮಂತಗೌಡ ಪಾಟೀಲ, ಸಾ:ಝಳಕಿ ತಾ: ಇಂಡಿ. |
| 25 | ಶ್ರೀ ಸಿದ್ದರಾಯ ಎಸ್.ಕರಜಗಿ, ಸಾ: ಚಟಚಣ ತಾ: ಇಂಡಿ ಜಿ: ವಿಜಾಪುರ. |
| 26 | ಶ್ರೀ ಸುಧಾಕರ ವಿ.ಪಾತ್ರೋಟ, ಸಾ: ಚಡಚಣ ತಾ:ಇಂಡಿ ಜಿ: ವಿಜಾಪುರ. |
| 27 | ಶ್ರೀ ಶ್ರೀನಿವಾಸ ಎಲ್ ಉಪ್ಪಾರ, ಸಾ: ಹಳಿಯಾಳ ತಾ: ಹಳಿಯಾಳ ಜಿ: ಕಾರವಾರ. |
| 28 | ಶ್ರೀ ಅನಿಲ ಗಂಗಪ್ಪ ಚಲವಾದಿ, ಸಾ: ಹಳಿಯಾಳ ತಾ: ಹಳಿಯಾಳ ಜಿ: ಕಾರವಾರ. |
| 29 | ಶ್ರೀ ರಾಮದಾಸ ಓಲೇಕಾರ, ಸ: ಹಳಿಯಾಳ ತಾ: ಹಳಿಯಾಳ ಜಿ: ಕಾರವಾರ. |
| 30 | ಶ್ರೀ ಅನೀಲ ತಂದೆ ಅಶೋಕ ಕೊಠಿ, ಸಾ: ವಿಜಾಪುರ ಕೆ.ಹೆಚ್.ಬಿ ಕಾಲನಿ, ಸೋಲಾಪುರ ರೋಡ್. |
| 31 | ಶ್ರೀ ರಾಚಯ್ಯ ಬಸಯ್ಯಾ ಲದ್ದಿಮಠ, ಸಾ: ವಿಜಾಪುರ ಮಠಪತಿ ಗಲ್ಲಿ ಮನೆ ನಂ. 101, ಅಮೀರ ಟಾಕೀಜ ರೋಡ್. |
| 32 | ಶ್ರೀ ನಾಗೇಂದ್ರ ಯಲ್ಲಪ್ಪ ಬಂಡಿವಡ್ಡರ, ಸಾ: ಕುದುರೆ ಸಾಲೊಡಗಿ ತಾ: ಬಸವನ ಬಾಗೇವಾಡಿ. |
| 33 | ಶ್ರೀ ಮುತ್ತುರಾಜ, ಬಿ.ಎನ್. ಪ್ರಥಮ ದರ್ಜೆ ಸಹಾಯಕರು, ಆರ್‌ಟಿಓ ಚೆಕ್‌ಪೋಸ್ಟ್ ಝಳಕಿ. |
| 34 | ಶ್ರೀ ವಾಮನ ಕೃಷ್ಣಾ ಹೇಮಾದ್ರಿ, ಆರ್‌ಟಿಓ, ವಿಜಾಪುರ. |
| 35 | ಶ್ರೀ ಎನ್.ಬಿ. ಫಾಲನೇತ್ರ, ಸಹಾಯಕ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ತನಿಖಾ ಠಾಣೆ, ಝಳಕಿ. |
| 36 | ಶ್ರೀ ಜಗದೀಶ ಶಿವಾಜಿ, ನಾರಾಯಣಕರ, ಸಹಾಯಕ ಇಂಜನೀಯರ್, ಲೋಕೋಪಯೋಗಿ ಇಲಾಖೆ, ಉಪವಿಭಾಗ, ಇಂಡಿ. |
| 37 | ಶ್ರೀ ಶರಣಪ್ಪ ಈರಪ್ಪ ಗಿಡಗಂಟಿ, ಸಿಪಿಸಿ, ಲೋಕಾಯುಕ್ತ ಪೊಲೀಸ್ ಠಾಣೆ, ವಿಜಾಪುರ. |
| 38 | ಶ್ರೀ ಶಂಕರ ನಾನಪ್ಪ ಲಮಾಣಿ, ಸಿಪಿಸಿ, ಲೋಕಾಯುಕ್ತ ಪೊಲೀಸ್ ಠಾಣೆ, ವಿಜಾಪುರ. |
| 39 | ಶ್ರೀ ರವೀಂದ್ರ ಕೃಷ್ಣಾಜಿರಾವ್ ನಾಡಿಗೇರ, ಸಿಪಿಸಿ, ಲೋಕಾಯುಕ್ತ ಪೊಲೀಸ್ ಠಾಣೆ, ವಿಜಾಪುರ. |
| 40 | ಶ್ರೀ ಮೋಹನಕುಮಾರ ಮುರಳೀಧರರಾವ್ ಉಮದಿ, ಸಿಪಿಸಿ, ಲೋಕಾಯುಕ್ತ ಪೊಲೀಸ್ ಠಾಣೆ, ವಿಜಾಪುರ. |
| 41 | ಶ್ರೀ ಮಹಾದೇವ ಅಶೋಕ ಜಾಧವ, ಸಿಪಿಸಿ, ಲೋಕಾಯುಕ್ತ ಪೊಲೀಸ್ ಠಾಣೆ, ವಿಜಾಪುರ. |
| 42 | ಶ್ರೀ ಗಂಗಾಧರ ನೀಲಪ್ಪ ಜೋಗೂರ ಸಿಪಿಸಿ, ಲೋಕಾಯುಕ್ತ ಪೊಲೀಸ್ ಠಾಣೆ, ವಿಜಾಪುರ. |
| 43 | ವಹಿಸಿಕೊಡುವ ಪಂಚನಾಮೆ ಮತ್ತು ಟ್ರ್ಯಾಪ್ ಪಂಚನಾಮೆ ಕಾಲಕ್ಕೆ ತೆಗೆಯಿಸಿದ ಫೋಟೋಗಳು. |
| 44 | ದಿನಾಂಕ : 30–06–2011ರ ದಿನಚರಿ ಪ್ರತಿ |
| 45 | ಕೊನೆಯ ವರದಿ |

ದಿನಾಂಕ : 30–6–2011 ರಂದು ಶ್ರೀ ಚಂದ್ರಕಾಂತ್ ಎಲ್.ಟಿ. ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬಿಜಾಪುರ ರವರು ಲೋಕಾಯುಕ್ತ ಠಾಣೆಯಲ್ಲಿ ಕರ್ತವ್ಯದಲ್ಲಿದ್ದಾಗ, ಫಿರ್ಯಾದುದಾರರಾದ ಶ್ರೀ ಕುಮಾರ ವಿಠಲ ಕನಸೆ, ಕೊಡಗಾನೂರ ಗ್ರಾಮ, ಬಸವನ ಬಾಗೇವಾಡಿ ತಾಲ್ಲೂಕು, ಬಿಜಾಪುರ ಜಿಲ್ಲೆರವರು ಬಿಜಾಪುರ ಲೋಕಾಯುಕ್ತ ಪೊಲೀಸ್ ಠಾಣೆಗೆ ಹಾಜರಾಗಿ ನೀಡಿದ ದೂರಿನ ಸಾರಾಂಶದಂತೆ, ಫಿರ್ಯಾದುದಾರರು ಕಳೆದ ಒಂದು ವರ್ಷದಿಂದ ಹೊನವಾಡ ಗ್ರಾಮದ ಶ್ರೀ ಶೈಲ ಬಸಪ್ಪ ಉಪ್ಪಿನ ಇವರ ಮಾಲೀಕತ್ವದಲ್ಲಿರುವ ವಾಹನ ಸಂ:ಕೆಎ–28/ಎ–7148ರ ಚಾಲಕನಾಗಿ ಕೆಲಸ ಮಾಡುತ್ತಿದ್ದು, ಸದರಿಯವರು ಬಿಜಾಪುರ ಸುತ್ತಮುತ್ತಲಿನ ಗ್ರಾಮಗಳಲ್ಲಿ ರೈತರು ಬೆಳೆಯುವ ಫಸಲುಗಳನ್ನು ಲೋಡ್ ಮಾಡಿಕೊಂಡು ಸೋಲಾಪುರಕ್ಕೆ ಹೋಗಿ ಮಾಲೀಕರು ತಿಳಿಸುವ ಸ್ಥಳಗಳಲ್ಲಿ ಇಳಿಸಿ ಬರುತ್ತಿರುತ್ತಾರೆ. ಈ ರೀತಿ ಮಾಡುವಾಗ ಗೂಡ್ಸ್ ವಾಹನವು ಝಳಕಿ ತನಿಖಾ ಠಾಣೆಯಲ್ಲಿ ಹಾದುಹೋಗಬೇಕಾಗಿದ್ದು, ಆ ಸಂದರ್ಭದಲ್ಲಿ ತನಿಖಾ ಠಾಣೆಯ ಅಧಿಕಾರಿಗಳು ಮತ್ತು ಖಾಸಗಿ ಏಜೆಂಟರುಗಳು ವಾಹನವನ್ನು ನಿಲ್ಲಿಸಿ ದಾಖಲೆಗಳನ್ನು ಹಾಗೂ ವಾಹನದಲ್ಲಿ ಸಾಗಿಸುತ್ತಿರುವ ವಸ್ತುಗಳನ್ನು ಪರಿಶೀಲಿಸಿ ರೂ. 500/– ಲಂಚದ ಹಣ ಪಡೆದುಕೊಂಡ ಬಳಿಕ ವಾಹನವನ್ನು ಬಿಡುವ ಪ್ರವೃತ್ತಿ ಬೆಳೆಸಿಕೊಂಡಿರುತ್ತಾರೆ. ದಿ: 30–06–2011 ರಂದು ಫಿರ್ಯಾದುದಾರರು ಕನ್ನೊಳ್ಳಿ ಗ್ರಾಮಕ್ಕೆ ವಾಹನ ಸಂ:ಕೆಎ–28/ಎ–7148ರಲ್ಲಿ ಇದ್ದಿಲು

ಲೋಡ್ ಮಾಡಿಕೊಂಡು ಝುಳಕಿ ತನಿಖಾ ಠಾಣೆ ಬಳಿಗೆ ಬಂದಾಗ, ಆರ್.ಟಿ.ಓ ಅಧಿಕಾರಿಗಳ ಆದೇಶದಂತೆ ತನಿಖಾ ಠಾಣೆಯಲ್ಲಿ ಕೆಲಸ ಮಾಡುತ್ತಿರುವ ಖಾಸಗಿ ಏಜೆಂಟರು ಗಾಡಿಯನ್ನು ನಿಲ್ಲಿಸಿ, ಲೋಡನ್ನು ಪರಿಶೀಲಿಸಿರುತ್ತಾರೆ. ಇದ್ದಿಲು ಸಾಗಿಸಲು ಪರವಾನಗಿ ಇರುವುದಾಗಿ ಫಿರ್ಯಾದುದಾರರು ತಿಳಿಸಿದರೂ ಸಹ ಖಾಸಗಿ ಏಜೆಂಟರುಗಳು ಆರ್.ಟಿ.ಓ. ಇನ್ಸ್ ಪೆಕ್ಟರ್ ಅವರಿಗೆ ಊ. 500/– ಲಂಚ ಕೊಟ್ಟು ಮುಂದೆ ಹೋಗುವಂತೆ ಒತ್ತಾಯಿಸಿರುತ್ತಾರೆ. ಫಿರ್ಯಾದುದಾರರು ಈ ವಿಚಾರವನ್ನು ವಾಹನ ಮಾಲೀಕರಿಗೆ ತಿಳಿಸಿದ್ದು ಸದರಿಯವರ ನಿರ್ದೇಶನದಂತೆ ಗೂಡ್ಸ್ ಗಾಡಿಯನ್ನು ರಸ್ತೆಯ ಪಕ್ಕಕ್ಕೆ ನಿಲ್ಲಿಸಿ ಲೋಕಾಯುಕ್ತ ಪೊಲೀಸ್ ಠಾಣೆಗೆ ಬಂದು ಝುಳಕಿ ತನಿಖಾ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಅಧಿಕಾರಿಗಳು ಹಾಗೂ ಖಾಸಗಿ ಏಜೆಂಟರುಗಳ ವಿರುದ್ಧ ಸೂಕ್ತ ಕಾನೂನು ಕ್ರಮ ಜರುಗಿಸುವಂತೆ ಕೋರಿ ದೂರು ನೀಡಿರುತ್ತಾರೆ.

ಸದರಿ ದೂರನ್ನು ಆಧರಿಸಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬಿಜಾಪುರ ಇವರು ಝುಳಕಿ ಚೆಕ್ ಪೋಸ್ಟ್ ನಲ್ಲಿ ಕರ್ತವ್ಯ ನಿರತರಾಗಿರುವ ಅಧಿಕಾರಿಗಳು ಹಾಗೂ ಖಾಸಗಿ ಏಜೆಂಟರುಗಳ ವಿರುದ್ಧ ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ ಕಲಂ 7,8,13(1)(ಡಿ) ಸಹವಾಚನ ಕಲಂ 13(2)ರ ಅಡಿಯಲ್ಲಿ ಮೊಕದ್ದಮೆ ಸಂಖ್ಯೆ : 7/2011ರ ಪ್ರಕಾರ ಪ್ರಕರಣವನ್ನು ದಿನಾಂಕ : 30–06–2011 ರಂದು ದಾಖಲಿಸಿ ತನಿಖೆ ಕೈಗೊಂಡಿರುತ್ತಾರೆ.

ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬಿಜಾಪುರ ಇವರು ಪಂಚರು, ಸಿಬ್ಬಂದಿ ಹಾಗೂ ಇನ್ನೊರ್ವ ಪೊಲೀಸ್ ಇನ್ಸ್‌ಪೆಕ್ಟರ್‌ರಾದ ಶ್ರೀ ರವೀಂದ್ರ.ಎಂ.ಕುರಬಗಟ್ಟಿ ಇವರ್ರೊಂದಿಗೆ ಸದರಿ ಗೂಡ್ಸ್ ವಾಹನವನ್ನು ಹಿಂಬಾಲಿಸಿಕೊಂಡು ಆರ್.ಟಿ.ಓ. ಚೆಕ್‌ಪೋಸ್ಟ್ ಹತ್ತಿರ ಬಂದು ಸೂಕ್ತವಾದ ಸ್ಥಳದಲ್ಲಿ ನಿಂತು ಗಮನಿಸಿದ್ದು ಫಿರ್ಯಾದಿ ಮತ್ತು ಪಂಚ ನಂ. 1ನೇಯವರು ಝುಳಕಿ ಆರ್.ಟಿ.ಓ. ಚೆಕ್‌ಪೋಸ್ಟ್ ಒಳಗೆ ಹೋಗಿದ್ದು, ಸ್ವಲ್ಪ ಹೊತ್ತಿನ ನಂತರ 20:00 ಗಂಟೆ ಸುಮಾರಿಗೆ ಫಿರ್ಯಾದಿದಾರರು ಹೊರಗಡೆ ಬಂದು ತಮ್ಮ ಕೈಯನ್ನು ಮೇಲಕ್ಕೆ ಎತ್ತಿ ಅಲುಗಾಡಿಸುವ ಮೂಲಕ ಸನ್ನೆಯನ್ನು ನೀಡಿದ ನಂತರ ಫಿರ್ಯಾದಿಯು ಎಲ್ಲರನ್ನು ಆರ್.ಟಿ.ಓ. ಚೆಕ್‌ಪೋಸ್ಟ್ ಒಳಗೆ ಕರೆದುಕೊಂಡು ಹೋಗಿದ್ದು, ಫಿರ್ಯಾದಿಯು ಸದರಿ ಕೋಣೆಯ ಉತ್ತರ ಬದಿಯ ಗೋಡೆಯ ಹತ್ತಿರ ನಿರತಿದ್ದ ಒಬ್ಬರನ್ನು ತೋರಿಸಿ ಇವರೇ ತನ್ನ ಕಡೆಯಿಂದ ರೂ. 500/– ಲಂಚದ ಹಣವನ್ನು ಪಡೆದುಕೊಂಡಿರುವವರು ಅಂತಾ ಹೇಳಿ ತೋರಿಸಲಾಗಿ, ಗುರುತಿನ ಚೀಟಿಯನ್ನು ತೋರಿಸಿ ಪಂಚರ ಹಾಗೂ ಅವರ ಪರಿಚಯ ಹೇಳಿ ಅವರ ಹೆಸರು ಕೇಳಲಾಗಿ ಅವರು ತಮ್ಮ ಹೆಸರು 1) ಪರಶುರಾಮ ತಂದೆ ರಾಜಪ್ಪ ಇಲಕಲ್, ಸಿಪಾಯಿ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಾರ್ಯಾಲಯ, ವಿಜಾಪುರ ಎಂದು ಹೇಳಿರುತ್ತಾರೆ. ಅಲ್ಲಿ ಟೇಬಲ್ ಹಿಂದೆ ಚೇರುಗಳಲ್ಲಿ ಕುಳಿತಿದ್ದ ಆರ್.ಟಿ.ಓ. ಅಧಿಕಾರಿಗಳನ್ನು ತೋರಿಸಿ ಇವರೇ ಮೋಟಾರ ವೆಹಿಕಲ್ ಇನ್ಸ್‌ಪೆಕ್ಟರ್‌ಗಳು, ಅವರ ಹೇಳಿಕೆಯ ಮೇರೆಗೆ ತಾನು ಹಣವನ್ನು ಸ್ವೀಕರಿಸಿರುತ್ತೇನೆ ಎಂದು ಹೇಳಿರುತ್ತಾರೆ. ಅಷ್ಟರಲ್ಲಿ ಒಬ್ಬ ವ್ಯಕ್ತಿಯು ಕೋಣೆಯಿಂದ ಪಶ್ಚಿಮ ದಿಕ್ಕಿಗೆ ಇರುವ ಬಾಗಿಲಿನಿಂದ ಹೊರಗೆ ಓಡಿ ಹೊರಟಿದ್ದು ತಕ್ಷಣ ಇನ್ನೊಬ್ಬ ಪಿಐರವರು ಹಾಗೂ ಸಿಬ್ಬಂದಿಯವರು ಆತನನ್ನು ಹಿಡಿದು ಆತನ ಹೆಸರು ವಿಚಾರಿಸಲು 2) ಲಕ್ಷ್ಮಣ ಮಲ್ಲಣ್ಣ ಬಿರಾದಾರ, ಖಾಸಗಿ ಏಜೆಂಟ್‌ರಾಗಿ ಕೆಲಸ ಮಾಡುತ್ತಿದ್ದು, ಅಲ್ಲಿಯೇ ಕುಳಿತಿದ್ದ ಇಬ್ಬರೂ ಮೋಟಾರ್ ವೆಹಿಕಲ್ ಇನ್ಸ್‌ಪೆಕ್ಟರ್‌ಗಳನ್ನು ತೋರಿಸಿ ಇವರುಗಳ 40,000/– ರೂಗಳನ್ನು ತನ್ನ ಕಡೆಗೆ ಕೊಟ್ಟಿದ್ದು ಅವರೆಲ್ಲರನ್ನು ನೋಡಿ ಗಾಬರಿಯಿಂದ ಓಡಿ ಹೋಗುತ್ತಿರುವುದಾಗಿ ತಿಳಿಸಿರುತ್ತಾರೆ. ನಂತರ ಅಲ್ಲಿ ಇದ್ದ ಆರ್.ಟಿ.ಓ ಅಧಿಕಾರಿಗಳ ಹೆಸರು ಕೇಳಲಾಗಿ 3) ಗಂಗಪ್ಪ ಶಣಶೆಪ್ಪ ಕೇರೂರ, ಹಿರಿಯ ಮೋಟಾರು ವಾಹನ ತನಿಖಾಧಿಕಾರಿ, ಆರ್.ಟಿ.ಓ ಚೆಕ್‌ಪೋಸ್ಟ್ ಝುಳಕಿ ಎಂದು ತಿಳಿಸಿರುತ್ತಾರೆ ಮತ್ತು 4) ಆನಂದ ತಂದೆ ವಿರೂಪಾಕ್ಷಪ್ಪ ಗಾಮನಗಟ್ಟಿ, ಮೋಟಾರು ವಾಹನ ನಿರೀಕ್ಷಕರು, ಆರ್.ಟಿ.ಓ. ಚೆಕ್‌ಪೋಸ್ಟ್ ಝುಳಕಿ ಎಂದು ತಿಳಿಸಿರುತ್ತಾರೆ.

ಫಿರ್ಯಾದಿಯನ್ನು ನಡೆದ ಸಂಗತಿ ಕುರಿತು ಕೇಳಿದ ನಂತರ ಅಲ್ಲಿಯೇ ಹಾಜರಿದ್ದ ಪಂಚ–ನಂ.1ನೆಯವರನ್ನು ನಡೆದ ಸಂಗತಿ ಕುರಿತು ಕೇಳಲಾಗಿ, ಅವರು ನಾನು ಫಿರ್ಯಾದಿ ಹಿಂದೆ ಆರ್‌ಟಿಓ ಚೆಕ್‌ಪೋಸ್ಟ್ ಒಳಗೆ ಬಂದು ಪಶ್ಚಿಮಕ್ಕೆ ಮುಖವಾಗಿರುವ ಬಾಗಿಲಿನ ಹತ್ತಿರ ನಿಂತು ಫಿರ್ಯಾದಿ ಮತ್ತು ಆರೋಪಿತರ ನಡುವೆ ನಡೆದ ಸಂಬಾಷಣೆಯನ್ನು ನೋಡಿ ಕೇಳಿಸಿಕೊಂಡಿದ್ದು, ಆಪಾದಿತ ನಂ–1ನೇಯವರು "ಕ್ಯಾ ಲೋಡ್ ಹೈ" ಎಂದು ಕೇಳಿದನು ಅದಕ್ಕೆ ಫಿರ್ಯಾದಿ, ಇದ್ದಿ ಲೋಡ್ ಹೈ ಸರ್, ಎಂದು ಹೇಳಿದನು. ಅದಕ್ಕೆ ಅವರು ಓವರ್ ಲೋಡ್ ಎಷ್ಟಿದೆ ಅಂತ ಕೇಳಿದರು ಅದಕ್ಕೆ ಫಿರ್ಯಾದಿ, ಓವರ್ ಲೋಡ್ ಬಹಳ ಇಲ್ಲ ಸರ್ ಎಂದು ಹೇಳಿದಾಗ ಅವರು ಹತ್ತಟಕ್ಕೆ ಏನ, ಬಾರಾಟಕ್ಕೆ ಆದ ಅಂದರು, ಅದಕ್ಕೆ ಫಿರ್ಯಾದಿ, ಓವರ್ ಲೋಡ್ ಬಹಳ ಇಲ್ಲ ಸರ್, ಸ್ವಲ್ಪ ಅಯಿತಿ ಅಂದರು, ಅದಕ್ಕೆ ಆಪಾದಿತರು ತನ್ನ ಕೈ ಬೆರಳುಗಳಿಂದ ಸನ್ನೆ ಮಾಡಿ 500/– ರೂ ಕೊಡಲು ತೋರಿಸಿ ಆಯಿತು ರೊಕ್ಕಾ ಕೊಡು, ನಡಿ ಎಂದು ಹೇಳಿದರು. ಆಗ ಫಿರ್ಯಾದಿಯು ತಮ್ಮ ಬಳಿ ಇದ್ದ ಪೌಡರ ಲೇಪಿಸಿದ ಹಣವನ್ನು ಆಪಾದಿತನಿಗೆ ಕೊಟ್ಟನು. ಅಪಾದಿತನು ಸದರಿ ಹಣವನ್ನು ತನ್ನ ಬಲಗೈಯಿಂದ ತೆಗೆದುಕೊಂಡು ಎರಡು ಕೈಗಳಿಂದ ಎಣಿಸಿ ನೋಡಿ ತಮ್ಮ ಬಲಗೈಯಲ್ಲಿ ಹಿಡಿದುಕೊಂಡರು. ಆಗ ಫಿರ್ಯಾದಿಯು ಆರ್‌ಟಿಓ ಚೆಕ್‌ಪೋಸ್ಟ್‌ನಿಂದ ಹೊರಗಡೆ ಬಂದು ಪೊಲೀಸ್ ನಿರೀಕ್ಷಕರವರು ನೀಡಿದ್ದ ಸೂಚನೆಯಂತೆ ತನ್ನ ಕೈಯನ್ನು ಮೇಲಕ್ಕೆ ಎತ್ತಿ ಅಲುಗಾಡಿಸುವ ಮೂಲಕ ಸನ್ನೆಯನ್ನು ಮಾಡಿರುತ್ತಾರೆ ಎಂದು ತಿಳಿಸಿರುತ್ತಾರೆ.

ಶ್ರೀ ಎಸ್.ಐ.ಗಿಡಗಂಟೆ, ಸಿಪಿಸಿ, ಇವರಿಗೆ ಎರಡು ಸ್ವಚ್ಛವಾದ ಬಿಳಿಬಟ್ಟಲುಗಳನ್ನು ತೆಗೆದುಕೊಂಡು ದ್ರಾವಣವನ್ನು ತಯಾರಿಸಲು ಸೂಚಿಸಿದ ಮೇರೆಗೆ ಸದರಿ ಸಿಬ್ಬಂದಿಯು ಎರಡು ಪ್ರತ್ಯೇಕವಾದ ಬಟ್ಟಲುಗಳಲ್ಲಿ ಶುದ್ಧವಾದ ನೀರು ಮತ್ತು ಸೋಡಿಯಂ ಕಾರ್ಬೋನೇಟ್‌ಗಳನ್ನು ಒಳಗೊಂಡ ದ್ರಾವಣವನ್ನು ತಯಾರಿಸಿದ್ದು, ಸದರಿ ದ್ರಾವಣವು ಬಣ್ಣರಹಿತವಾಗಿದ್ದು, ಅವುಗಳಲ್ಲಿ ಆರೋಪಿ ನಂ. 1ನೇಯವರಾದ ಶ್ರೀ ಪರಶುರಾಮ ರಾಜಪ್ಪ ಇಲಕಲ್, ಸಿಪಾಯಿ, ಇವರ ಬಲಗೈಯನ್ನು ಒಂದು ಬಟ್ಟಲಿನಲ್ಲಿ ಮತ್ತು ಎಡಗೈಯನ್ನು ಇನ್ನೊಂದು ಬಟ್ಟಲಿನಲ್ಲಿ ಅದ್ದಿ ತೊಳೆಯಲು ತಿಳಿಸಿದಾಗ ಅವರು ತಮ್ಮ ಬಲಗೈಯಲ್ಲಿ ಹಿಡಿದುಕೊಂಡಿದ್ದ ಲಂಚದ ಹಣವನ್ನು ಎಂ.ವಿ.ಐ ರವರ ಟೇಬಲ್ ಮೇಲೆ ಇಟ್ಟು ತಮ್ಮ ಎರಡೂ ಕೈ ಬೆರಳುಗಳನ್ನು ಬಣ್ಣರಹಿತ ದ್ರಾವಣದಲ್ಲಿ ತೊಳೆದರು, ಆಗ ಎರಡು ಕೈ ಬೆರಳುಗಳನ್ನು ತೊಳೆಯಿಸಿದ ಬಟ್ಟಲುಗಳಲ್ಲಿಯ ದ್ರಾವಣವು ತಿಳಿ ಗುಲಾಬಿ ಬಣ್ಣಕ್ಕೆ ಪರಿವರ್ತನೆ ಹೊಂದಿದ್ದು, ಬಲಗೈಯನ್ನು ತೊಳೆಯಿಸಿದ ಬಟ್ಟಲದಲ್ಲಿಯ ಪರಿವರ್ತನೆ ಹೊಂದಿದ ದ್ರಾವಣವನ್ನು ಎರಡು ಪ್ರತ್ಯೇಕವಾದ ಗಾಜಿನ ಬಾಟಲಿಗಳಲ್ಲಿ ಹಾಕಿ ಬಿಳಿ ಬಟ್ಟೆಯಿಂದ ಬಾಹಿ ಬಂದು ಮಾಡಿ, ವಿವರಣೆ ಚೀಟಿ ಅಂಟಿಸಿ ಪಂಚ–1ನೇಯವರ ಕಡೆಗೆ ಇದ್ದ ಇಂಗ್ಲೀಷ್ "ಎನ್.ಎಸ್" ಎಂಬ ಸೀಲನ್ನು ತೆಗೆದುಕೊಂಡು ಅರಗಿನಲ್ಲಿ ಸೀಲು ಹಾಕಿ ಅವುಗಳಿಗೆ ಆರ್ಟಿಕಲ್ ನಂ. 5,5(ಎ) ಎಂದು ಗುರ್ತಿಸಿದ್ದು ಅದೇ ಎಡಗೈ ಬೆರಳುಗಳನ್ನು ತೊಳೆಯಿಸಿದ ಬಟ್ಟಲುಗಳಲ್ಲಿಯ ದ್ರಾವಣವು ಸಹ ತಿಳಿ ಗುಲಾಬಿ ಬಣ್ಣಕ್ಕೆ ಪರಿವರ್ತನೆ ಹೊಂದಿದ್ದು, ಈ ಪರಿವರ್ತನೆ ಹೊಂದಿದ ದ್ರಾವಣವನ್ನು ಎರಡು ಪ್ರತ್ಯೇಕವಾದ ಗಾಜಿನ ಬಾಟಲಿಗಳಲ್ಲಿ ಹಾಕಿ ಬಿಳಿ ಬಟ್ಟೆಯಿಂದ ಬಾಯಿ ಬಂದು ಮಾಡಿ, ವಿವರಣೆ ಚೀಟಿ ಅಂಟಿಸಿ, ಅರಗಿನಲ್ಲಿ ಸೀಲು ಹಾಕಿ ಅವುಗಳಿಗೆ ಆರ್ಟಿಕಲ್ ನಂ. 6, 6(ಎ) ಎಂದು ಗುರ್ತಿಸಿರುತ್ತಾರೆ.

ಶ್ರೀ ಪರಶುರಾಮ ರಾಜಪ್ಪ ಇಲಕಲ್, ಸಿಪಾಯಿ, ಇವರಿಗೆ ಫಿರ್ಯಾದಿಯಿಂದ ಸ್ವೀಕರಿಸಿದ ಲಂಚದ ಹಣವನ್ನು ಹಾಜರುಪಡಿಸಲು ತಿಳಿಸಲಾಗಿ ಅವರು ತಮ್ಮ ಬಲಗೈಯಲ್ಲಿದ್ದ ಲಂಚದ ಹಣ ರೂ. 500/–ಗಳನ್ನು ಹಾಜರುಪಡಿಸಿದ್ದು, ಸದರಿ ನೋಟುಗಳನ್ನು ಪಂಚರಿಗೆ ಪರಿಶೀಲಿಸಲು ತಿಳಿಸಲಾಗಿ, ಅವರು ಅವುಗಳನ್ನು ತೆಗೆದುಕೊಂಡು ಪರಿಶೀಲಿಸಿ ನೋಡಲಾಗಿ ಅವುಗಳು ಈ ಹಿಂದೆ ಪ್ರಾಯೋಗಿಕ ಪಂಚನಾಮೆಯಲ್ಲಿ ನಮೂದಿಸಿದ ಸಂಖ್ಯೆಯ ನೋಟುಗಳೇ ಇರುವುದನ್ನು ಖಚಿತಪಡಿಸಿಕೊಂಡಿರುತ್ತಾರೆ.

ಆಪಾದಿತ ನಂ. 1ನೇಯವರಾದ ಶ್ರೀ ಪಿ.ಆರ್.ಇಲಕಲ್, ಸಿಪಾಯಿ ಇವರ ಅಂಗ ಪರಿಶೀಲನೆ ಮಾಡಲಾಗಿ ಅವರು ತೊಟ್ಟುಕೊಂಡ ಪ್ಯಾಂಟಿನ ಬಲಗಡೆಯ ಜೇಬನ್ನು ಪರಿಶೀಲಿಸಿದಾಗಿ 100x17 ದರದ ನೋಟುಗಳು ಒಟ್ಟು ರೂ. 1700–00 ಹೆಚ್ಚುವರಿ ಹಣ ದೊರೆತಿದ್ದು, ಸದರಿ ಹಣದ ಬಗ್ಗೆ ಪರಿಶೀಲಿಸಲಾಗಿ ಯಾವುದೇ ರಸೀದಿ ವಗೈರೆ ಕಂಡು ಬರದೇ ಇದ್ದುದ್ದರಿಂದ ಸದರಿ ಹಣವನ್ನು ಜಪ್ತಿ ಮಾಡಿರುತ್ತಾರೆ.

ಆಪಾದಿತ ನಂ. 2ನೇಯವರಾದ ಲಕ್ಷ್ಮಣ ಮಲ್ಲಣ್ಣ ಬಿರಾದಾರ, ಖಾಸಗಿ ಏಜೆಂಟ್ ಇವರ ಹತ್ತಿರ ಇಬ್ಬರೂ ಆಪಾದಿತ ಮೋಟಾರು ವಾಹನ ನಿರೀಕ್ಷಕರವರುಗಳು ಕೊಟ್ಟಿದ್ದ (100x400) ದರದ ನೋಟುಗಳು ಒಟ್ಟು 40,000/– ರೂ.ಗಳ ಹಣವನ್ನು ಆಪಾದಿತರಿಗೆ ಹಾಜರುಪಡಿಸಲು ತಿಳಿಸಿದಾಗ ಅವರು ಹಾಜರುಪಡಿಸಿದ್ದು, ಸದರಿ ಹಣದ ಬಗ್ಗೆ ಪರಿಶೀಲಿಸಲಾಗಿ ಯಾವುದೇ ರಸೀದಿ ಕಂಡು ಬರದೇ ಇದ್ದುದ್ದರಿಂದ ಸದರಿ ಹಣವನ್ನು ಜಪ್ತಿ ಮಾಡಿರುತ್ತಾರೆ.

ಆಪಾದಿತ ನಂ. (3) ಶ್ರೀ ಗಂಗಪ್ಪ ಶಣಶೆಪ್ಪ ಕೇರೂರ್, ಹಿರಿಯ ಮೋಟಾರು ವಾಹನ ನಿರೀಕ್ಷಕರು ಆರ್‌ಟಿಓ, ಝುಳಕಿ ಚೆಕ್‌ಪೋಸ್ಟ್ ಮತ್ತು ಆಪಾದಿತ ನಂ. (4) ಶ್ರೀ ಆನಂದ ವಿರೂಪಾಕ್ಷಪ್ಪ ಗಾಮನಗಟ್ಟಿ, ಮೋಟಾರು ವಾಹನ ನಿರೀಕ್ಷಕರು ಇವರುಗಳ ಅಂಗ ಪರಿಶೀಲನೆ ಮಾಡಿದಾಗ ಯಾವುದೇ ಹಣ ವಗೈರೆ ದೊರೆಯಲಿಲ್ಲ.

ಶ್ರೀ ಗಂಗಪ್ಪ ಶಣಶೆಪ್ಪ ಕೇರೂರ್, ಹಿರಿಯ ಮೋಟಾರು ವಾಹನ ನಿರೀಕ್ಷಕರು ಆರ್‌ಟಿಓ, ಝುಳಕಿ ಚೆಕ್‌ಪೋಸ್ಟ್ ಇವರಿಗೆ ಫಿರ್ಯಾದಿಯ ಕೆಲಸಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಹಾಜರುಪಡಿಸಲು ಹೇಳಿದಾಗ, ನೌಕರರು ತಮ್ಮ ಟೇಬಲ್‌ನ ಮೇಲಿದ್ದ ಹತ್ತು ಮೂಲ ಕಾಗದಪತ್ರಗಳನ್ನು ಹಾಜರುಪಡಿಸಿದ್ದು, ಅವುಗಳನ್ನು ವಿವರಣೆ ಮಾಡಿ ನಮೂದಿಸಿದ ಪುಟಗಳ ಮೇಲೆ ಲೋಕಾಯುಕ್ತ ಪೊಲೀಸ್ ನಿರೀಕ್ಷಕರು ಮತ್ತು ಪಂಚರು ಸಹಿ ಮಾಡಿದ ನಂತರ ಝೆರಾಕ್ಸ್ ಪ್ರತಿಗಳನ್ನು ತಯಾರಿಸಿ ಅವುಗಳನ್ನು ಝುಳಕಿ ಚೆಕ್‌ಪೋಸ್ಟ್‌ನಲ್ಲಿ ಪ್ರಥಮ ದರ್ಜೆ ಸಹಾಯಕರಾದ ಶ್ರೀ ಬಿ. ಎನ್. ಮುತ್ತುರಾಜ್ ರವರಿಂದ ಧೃಢೀಕರಿಸಿಕೊಂಡು ವಶಕ್ಕೆ ತೆಗೆದುಕೊಂಡಿರುತ್ತಾರೆ.

ಫಿರ್ಯಾದುದಾರರಿಂದ ಆಪಾದಿತ–1 ಶ್ರೀ ಪರಶುರಾಮ ರಾಜಪ್ಪ ಇಲಕಲ್, ಸಿಪಾಯಿ ಸ್ವೀಕರಿಸಲೆನ್ನಲಾದ ಅಕ್ರಮ ಸಂಭಾವನೆ ಮೊತ್ತ ರೂ. 500–00ಗಳನ್ನು ಪಂಚರ ಮುಖಾಂತರ ಪರಿಶೀಲಿಸಿ, ನಂತರ ವಶಪಡಿಸಿಕೊಳ್ಳಲಾಗಿದೆ. ಪ್ರಕರಣದ ತನಿಖೆಯ ವೇಳೆಯಲ್ಲಿ ವಶಪಡಿಸಿಕೊಳ್ಳಲಾದ ಸ್ವತ್ತುಗಳನ್ನು ರಾಸಾಯನಿಕ ಪರೀಕ್ಷೆಗೆ ಒಳಪಡಿಸಿದಾಗ ತನಿಖೆಗೆ ಪೂರಕವಾದ ಅಂಶವಿರುವುದು ವೈಜ್ಞಾನಿಕವಾಗಿ ದೃಢಪಟ್ಟಿರುತ್ತದೆ ಹಾಗೂ ಸದರಿ ನೌಕರರ ಬಳಿ ರೂ. 1700–00 ಹೆಚ್ಚುವರಿ ಹಣ ದೊರತಿದ್ದು ಈ ಬಗ್ಗೆ ಯಾವುದೇ ದಾಖಲೆ, ರಸೀದಿ ವಗೈರೆ ಕಂಡುಬಂದಿಲ್ಲವಾದ್ದರಿಂದ ಸದರಿ ಹಣವನ್ನು ವಶಪಡಿಸಿಕೊಳ್ಳಲಾಗಿದೆ.

ಖಾಸಗಿ ಏಜೆಂಟನೆಂದು ಹೇಳಲಾದ ಶ್ರೀ ಲಕ್ಷ್ಮಣ ಮಲ್ಲಣ್ಣ ಬಿರಾದಾರ ಇವರ ಹತ್ತಿರ ಶ್ರೀ ಆನಂದ ವಿ.ಗಾಮನಗಟ್ಟಿ, ಮೋಟಾರು ವಾಹನ ನಿರೀಕ್ಷಕರು ಮತ್ತು ಶ್ರೀ ಜಿ.ಎಸ್.ಕೇರೂರ್, ಹಿರಿಯ ಮೋಟಾರು ವಾಹನ ನಿರೀಕ್ಷಕರು ಇವರುಗಳು ಕೊಟ್ಟಿರುವರೆನ್ನಲಾದ ರೂ. 40,000–00 ಹಣ ಇದ್ದು ಇದಕ್ಕೆ ಯಾವುದೇ ದಾಖಲೆ, ರಸೀದಿ ವಗೈರೆ ಕಂಡು ಬಂದಿಲ್ಲವಾದ್ದರಿಂದ ಸದರಿ ಹಣವನ್ನು ವಶಪಡಿಸಿಕೊಳ್ಳಲಾಗಿದೆ. ಸಾಕ್ಷಿದಾರರ ಹೇಳಿಕೆಯಿಂದ ಇತರೆ ಸಾಕ್ಷಾಧಾರಗಳಿಂದ ಸಾಂದರ್ಭಿಕ ಸಾಕ್ಷಾಧಾರಗಳಿಂದ ಶ್ರೀ ಜಿ.ಎಸ್. ಕೇರೂರ್, ಹಿರಿಯ ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ಅಮಾನತ್ತಿನಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿ, ಗುಲ್ಬರ್ಗಾ), ಶ್ರೀ ಆನಂದ ವಿ.ಗಾಮನಗಟ್ಟಿ, ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ಅಮಾನತ್ತಿನಲ್ಲಿ ಸಹಾಯಕ ಪ್ರಾದೇಶಿಕ ಸಾರಿಗೆ ಕಛೇರಿ, ಸಾಗರ) ಹಾಗೂ ಶ್ರೀ ಪರಶುರಾಮ ರಾಜಪ್ಪ ಇಲಕಲ್, ಸಿಪಾಯಿ (ಪ್ರಸ್ತುತ ಅಮಾನತ್ತಿನಲ್ಲಿ ಪ್ರಾದೇಶಿಕ ಸಾರಿಗೆ ಕಛೇರಿ, ಚಿತ್ರದುರ್ಗ) ಕಲಂ 7,8,13(1)ಡಿ ಸಹವಾಚನ 13 (2) ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಪ್ರಕಾರ ಶಿಕ್ಷಾರ್ಹ ಅಪರಾಧವೆಸಗಿರುವುದು ಸಾಬೀತಾಗಿರುತ್ತದೆ.

ಈ ಎಲ್ಲಾ ಕಾರಣಗಳಿಂದ ಆಪಾದಿತರು ಲಂಚ ನಿರೋಧ ಕಾಯ್ದೆ – 1988 ರ ಕಲಂ 7,8,13(1)(ಡಿ)ರ ಜೊತೆಯಲ್ಲಿ ಕಲಂ 13(2) ಮತ್ತು 34 ಐ.ಪಿ.ಸಿರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ) ಅನ್ವಯ ಮಂಜೂರಾತಿ ನೀಡುವುದು ಅವಶ್ಯಕ ಎಂದು ಸರ್ಕಾರವು ಮನಗಂಡಿದೆ.

ಶ್ರಿ ಆನಂದ ವಿ. ಗಾಮನಗಟ್ಟಿ, ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ಅಮಾನತ್ತಿನಲ್ಲಿ) ಹಾಗೂ ಶ್ರೀ ಪರಶುರಾಮ ರಾಜಪ್ಪ ಇಲಕಲ್, ಸಿಪಾಯಿ (ಪ್ರಸ್ತುತ ಅಮಾನತ್ತಿನಲ್ಲಿ) ಇವರುಗಳು ಗ್ರೂಫ್ "ಸಿ" ನೌಕರರುಗಳಾಗಿದ್ದು ಈ ನೌಕರರುಗಳಿಗೆ ಸಂಬಂಧಿಸಿದಂತೆ ಸಾರಿಗೆ ಆಯುಕ್ತರು ಸಕ್ಷಮ ಪ್ರಾಧಿಕಾರವಾಗಿದ್ದು, ಸಾರಿಗೆ ಆಯುಕ್ತರು ಅಭಿಯೋಜನಾ ಮಂಜೂರಾತಿಯನ್ನು ಇಲಾಖಾ ಮುಖ್ಯಸ್ಥರಾದ ಇವರು ತಮ್ಮ ಆದೇಶ ಸಂಖ್ಯೆ : ಸಾಆ/ಸಿ–02/ವೈವ–69/2011–12, ದಿನಾಂಕ : 04–01–2012ರಲ್ಲಿ ನೀಡಿರುತ್ತಾರೆ.

ಶ್ರೀ ಜಿ. ಎಸ್. ಕೇರೂರ್, ಹಿರಿಯ ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ಅಮಾನತ್ತಿನಲ್ಲಿ) ಸಾರಿಗೆ ಇಲಾಖೆ ಇವರು ಗ್ರೂಫ್ 'ಬಿ' ಅಧಿಕಾರಿಯಾಗಿದ್ದು, ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆರೋಪಿತ ಅಧಿಕಾರಿಯನ್ನು ಸರ್ಕಾರಿ ಸೇವೆಯಿಂದ ತೆಗೆದುಹಾಕಲು ಅಧಿಕಾರ ಹೊಂದಿದ್ದು, ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ – 1988ರ ಕಲಂ 19(1)(ಬಿ)ರ ಅಡಿ ಆರೋಪಿತ ನೌಕರರಾದ ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7,8, 13(1)(ಡಿ) ಸಹವಾಚನ 13(2)ರ ಅಡಿಯಲ್ಲಿ ಎಸಗಿರುವ ಅಪರಾಧಕ್ಕಾಗಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಹೊಂದಿದೆ. ಅದರಂತೆ ಈ ಕೆಳಕಂಡಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಾರಿಇ 283 ಸಾಇಸೇ 2011, ಬೆಂಗಳೂರು, ದಿನಾಂಕ: 06–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದಾಗಿ, ಸರ್ಕಾರವು ಶ್ರೀ ಗಂಗಪ್ಪ ಶಣಶೆಪ್ಪ ಕೇರೂರ, ಹಿರಿಯ ಮೋಟಾರು ವಾಹನ ನಿರೀಕ್ಷಕರು (ಪ್ರಸ್ತುತ ಅಮಾನತ್ತಿನಲ್ಲಿ) ಇವರನ್ನು ಹುದ್ದೆಯಿಂದ ತೆಗೆದು ಹಾಕುವ/ವಜಾ ಮಾಡುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಕರ್ನಾಟಕ ಸರ್ಕಾರವು ಶ್ರೀ ಗಂಗಪ್ಪ ಶಣಶೆಪ್ಪ ಕೇರೂರ, ಹಿರಿಯ ಮೋಟಾರು ವಾಹನ ನಿರೀಕ್ಷಕರು ಇವರನ್ನು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7,8,13(1)(ಡಿ) ಸಹವಾಚನ 13(2) ಅಡಿಯಲ್ಲಿ ಮತ್ತು ಕಲಂ 34 ಭಾರತೀಯ ದಂಡ ಸಂಹಿತೆ ಅಡಿಯಲ್ಲಿ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ

ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 19(1)(ಬಿ) ಅನ್ವಯ ಸಂಬಂಧಪಟ್ಟ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಲಾಗಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ ನಿರ್ವಹಣೆ) ನಿಯಮಾವಳಿಗಳು, 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖನಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು, ಅಂತಹ ಆದೇಶವನ್ನು ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿಗಳು 1977ರನ್ವಯ ಈ ಅಭಿಯೋಜನಾ ಮಂಜೂರಾತಿ ಆದೇಶವನ್ನು ನನ್ನ ಕಚೇರಿಯ ಮೊಹರು ಮತ್ತು ನನ್ನ ಸಹಿಯೊಂದಿಗೆ ದಿನಾಂಕ : 06–02–2012 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಾಮಚಂದ್ರ**

ಪಿ.ಆರ್.541 ಸರ್ಕಾರದ ಅಧೀನ ಕಾರ್ಯದರ್ಶಿ

ಸಾರಿಗೆ ಇಲಾಖೆ

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಸಚಿವಾಲಯ

**ತಿದ್ದುಪಡಿ**

ಸಂಖ್ಯೆ: ಪಸಂಮೀ 121 ಕಹಾಮ 2011, ಬೆಂಗಳೂರು, ದಿನಾಂಕ 24–01–2012

ಸರ್ಕಾರದ ಆದೇಶ ಸಂಖ್ಯೆ ಪಸಂಮೀ, 121 ಕಹಾಮ 2011 ದಿನಾಂಕ 06–01–2011ರ ಆದೇಶ ಭಾಗದಲ್ಲಿ **"**ಎಲ್ಲಾ ವಿಧಗಳ ನಂದಿನಿ ಹಾಲಿನ ಗರಿಷ್ಠ ಮಾರಾಟ ದರಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಪ್ರತಿ ಲೀಟರಿಗೆ ₹3.00 ರಂತೆ ಹೆಚ್ಚಿಸಿ ಆದೇಶಿಸಿದೆ**"** ಎನ್ನುವುದಕ್ಕೆ ಬದಲಾಗಿ **"**ನಂದಿನಿ ಟೋನ್ಡ್ ಹಾಲಿನ ಗರಿಷ್ಟ ಮಾರಾಟ ದರಗಳನ್ನು ತಕ್ಷಣದಿಂದಲೆ ಜಾರಿಗೆ ಬರುವಂತೆ ಪ್ರತಿ ಲೀಟರಿಗೆ ₹3.00 ರಂತೆ ಹೆಚ್ಚಿಸಿ ಆದೇಶಿಸಿದೆ**"** ಎಂದು ತಿದ್ದುಪಡಿ ಮಾಡಲಾಗಿದ್ದು ಅದರಂತೆ ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸರಸಾ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 542 ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಪಶುಸಂಗೋಪನೆ)

## COMMERCE AND INDUSTRIES SECRETARIAT

**Sub:** Extension of validity period of the approval of project proposal of Shri Sai Priya Sugars Ltd., Hippargi-Maigur-reg.

**Read:** 1. Govt. Order No.: CI 46 SPI 2010, dated 10-02-2010

2. Representation of Shri Sai Priya Sugars Ltd., dated 18-01-2012

**Preamble:**

The project proposal of Shri Sai Priya Sugars Ltd., to setup "5000 TCD Sugar Plant with 30 MW co-generation & 120 KLPD Distillery" was approved by the 20$^{th}$ State High Level Clearance Committee and necessary Govt. Order was issued on 10-02-2010.

Shri Sai Priya Sugars Ltd., made a representation requesting for renewal of the approval of their project stating that various requirements are yet to be complied with before submitting proposal for land acquisition and section 109 of KLR Act. And out of total requirement of land 86.38 A.G. land have been purchased and another 37.38 A.G. land is to be purchased in the 2$^{nd}$ phase. The approval given was for a period of 2 years from date of issue of the G.O. read at (1) above. Therefore requested to renew the approval of their proposal for 2 years from 09-02-2012.

Hence, the following Order.

**Government Order No. CI 46 SPI 2010, Bangalore, dated 08-02-2012**

In the circumstances explained in the preamble, Government is pleased to extend the validity of the approval given to Shri Sai Priya Sugars Ltd, to setup "5000 TCD Sugar Plant with 30 MW co-generation & 120 KLPD Distillery" vide G.O. No. CI 46 SPI 2010, dated 10-02-2010 by another 2 years from 09-02-2012 i.e., upto 08-02-2014.

Other terms and conditions remain the same as in the G.O. read at (1) above.

By Order and in the name of the Governor of Karnataka

**Jyothi R.J.**

Desk Officer (Technical Cell)

P.R. 543 Commerce & Industries Department

## COMMERCE AND INDUSTRIES SECRETARIAT

**Sub:** Approval for change of name of the company from M/s Infotel Broadband Services Pvt. Ltd., to M/s Infotel Broadband Services Ltd.,

**Read:** 1. Govt. Order No. CI 274 SPI 2011, dated 16-12-2011
2. Representation of M/s Infotel Broadband Services Ltd., dated 19-12- 2011.

**Preamble:**

The project proposal of M/s Infotel Broadband Services Pvt. Ltd., to provide "Telecom Broadband Services" throughout State of Karnataka was approved by the 26th State High Level Clearance Committee and necessary Govt. Order was issued on 19-12-2011.

M/s Infotel Broadband Services Ltd made a representation stating that in the afore said G.O. the name of the company is mentioned of M/s Infotel Broadband Services Pvt. Ltd., and requested to change the name of the company as INFOTEL BROADAND SERVICES LIMITED. The company has produced the certificate of Incorporation dated 19-07-2010 for confirmation.

Hence, the following Order

**Government Order No. CI 46 SPI 2010, Bangalore, dated 08-02-2012**

Government is pleased to approve the change in the name of the company from M/s Infotel Broadband Services Pvt. Ltd., to M/s Infotel Broadband Services Ltd. for the implementations of the project approved vide G.O. mentioned above at (1).

Other terms and conditions remain the same as in the G.O. read at (1) above.

By Order and in the name of the Governor of Karnataka
**Jyothi R.J.**
Desk Officer (Technical Cell)
Commerce & Industries Department

P.R. 544

## COMMERCE AND INDUSTRIES SECRETARIAT

**Sub:** Entrusting M/s Ernst & Young Pvt. Ltd., the task of preparing K-SIP for Karnataka-negotiation of best price-regarding.

**Read:** 1. Govt. Order No. CI 22 SPI 2011(P), dated 29-10-2011
2. Submission note by Secretary IDD in the file ID 129 ITS 2011, dated 02-02-2012.

**Preamble:**

Administrative sanction for procurement of Knowledge Partner and Transaction Advisor of GIM-2012 from M/s Ernst & Young Pvt. Ltd., was given vide Government Order read at (1) above, to organize GIM 2012 at a cost of Rs. 5,95,00,000/-

Now Infrastructure Development Department has desired to entrust the Task of preparing Strategic Infrastructure Plan for Karnataka to M/s Ernst & Young Pvt. Ltd., as an extension of the work entrusted to them vide Government Order read above.

The process requires negotiation for arriving at most economical price for the Task mentioned above.

The Government has examined the proposal submitted by the secretary to Government Infrastructure Development Department in detail and hence the following order.

**Government Order No. CI 54 SPI 2012, Bangalore, dated 09-02-2012**

Government is pleased to constitute a Negotiation Committee with the following officers for negotiating the most economical price for the task of preparing K-SIP for Karnataka by M/s Ernst & Young Pvt. Ltd., as an extension of the Knowledge Partner work for GIM-2012 entrusted vide Government Order mentioned above, as required to comply with the transparency norms of KTPP Act.

| | | | |
|---|---|---|---|
| 1. | Secretary to Government, Infrastructure Development Department | … | Chairman |
| 2. | Commissioner for Industrial Development | ... | Member |
| 3. | Director (PPP), Infrastructure Development Department | … | Member |
| 4. | Smt. Swaroopa T.K. Joint Director, KUM | … | Member Secretary |
| 5. | Representation of i-Deck | … | Member |

By Order and in the name of the Governor of Karnataka
**Jyothi R.J.**
Desk Officer (Technical Cell)
Commerce & Industries Department

P.R. 545

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2010ಕ್ಕೆ ಸಂಬಂಧಿಸಿದಂತೆ ಹೆಚ್ಚುವರಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ :** ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ: ಎಇಪಿ1/ಜಿಮ್ 2010: ಹೆಚ್ಚುವರಿ/41/2011–12, ದಿನಾಂಕ 31–11–2011.

**ಪ್ರಸ್ತಾವನೆ :**

2010ನೇ ಸಾಲಿನಲ್ಲಿ ಜೂನ್ 3 ಮತ್ತು 4 ರಂದು ನಡೆದ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ ಕಾರ್ಯಕ್ರಮಕ್ಕೆ ಒಟ್ಟು ರೂ. 32,73,15,772/– ಗಳನ್ನು ವೆಚ್ಚ ಮಾಡಲಾಗಿದೆ ಎಂದೂ, ಈ ಸಂಬಂಧ ಕರ್ನಾಟಕ ಉದ್ಯೋಗ ಮಿತ್ರ ಸಂಸ್ಥೆಗೆ ಒಟ್ಟು ರೂ. 27,04,50,000/– ಮಾತ್ರ ಸರ್ಕಾರದಿಂದ ಮತ್ತು ಕೆ.ಐ.ಎ.ಡಿ.ಬಿ. ಯಿಂದ ಬಿಡುಗಡೆ ಮಾಡಲಾಗಿದ್ದು ಉಳಿದ ಮೊತ್ತ ರೂ. 5,90,05,000/–ಗಳನ್ನು ಬಿಡುಗಡೆ ಮಾಡುವಂತೆ ಆಯುಕ್ತರು ತಮ್ಮ ಶಿಫಾರಸ್ಸು ಪತ್ರದಲ್ಲಿ ತಿಳಿಸಿರುತ್ತಾರೆ. ಈ ಕೊರತೆಯ ವಿವರಗಳು 2010–11ನೇ ಸಾಲಿನ ಸಂಸ್ಥೆಯ ವಾರ್ಷಿಕ ವರದಿ ಪೂರ್ಣಗೊಂಡ ನಂತರ ತಿಳಿದು ಬಂದಿದೆ ಎಂದು ತಿಳಿಸುತ್ತಾ, ಇದರಿಂದಾಗಿ ಸಂಸ್ಥೆಯ ಆರ್ಥಿಕ ಕೊರತೆಗೆ ಕಾರಣವಾಗಿದೆ ಎಂದು ತಿಳಿಸಿ ಪ್ರಸಕ್ತ ಸಾಲಿನಲ್ಲಿ ಒಟ್ಟು ಹೆಚ್ಚುವರಿ ಅನುದಾನ ರೂ. 5,90,05,477/– ಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಆಯುಕ್ತರು ಪ್ರಸ್ತಾವನೆಯ ಪರ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಸಿಐ 104 ಎಸ್‌ಪಿಐ 2010, ಬೆಂಗಳೂರು, ದಿನಾಂಕ 09–02–2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2010ರ ಅಂಗವಾಗಿ ಕರ್ನಾಟಕ ಉದ್ಯೋಗ ಮಿತ್ರ ವತಿಯಿಂದ ವೆಚ್ಚ ಮಾಡಿರುವ ಹೆಚ್ಚುವರಿ ಅನುದಾನ ರೂ. 5,90,05,000/– (ರೂ. ಐದು ಕೋಟಿ ತೊಂಬತ್ತು ಲಕ್ಷ ಐದು ಸಾವಿರ ಮಾತ್ರ) ಮೊತ್ತವನ್ನು 2011–12ನೇ ಸಾಲಿನ ಆಯವ್ಯಯದಲ್ಲಿ ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಲೆಕ್ಕ ಶೀರ್ಷಿಕೆ "2852–80–800–0–46–125 (ಯೋಜನೆ) ಅಡಿಯಲ್ಲಿ ಡ್ರಾ ಮಾಡಲು ಮಂಜೂರಾತಿಯನ್ನು ನೀಡಿದೆ.

ಈ ಹಣವನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರು ಸಲ್ಲಿಸುವ ಪಾವತಿ ರಸೀದಿಯ ಮೇಲೆ ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ರವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆ ಬೆಂಗಳೂರು ಅವರಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 151 ವೆಚ್ಚ–1/ 2012, ದಿನಾಂಕ 04–02–2012 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜ್ಯೋತಿ, ಆರ್.ಜೆ.**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 546

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಸಮಾಜ ಪರಿವರ್ತನ ಸಮುದಾಯ ಮತ್ತಿತರರು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ದಾಖಲಿಸಿರುವ ರಿಟ್ ಅರ್ಜಿ ಸಂಖ್ಯೆ: 562:2009ರ ಕುರಿತು.–

**ಪ್ರಸ್ತಾವನೆ :**

ಕರ್ನಾಟಕ ಮತ್ತು ಆಂಧ್ರಪ್ರದೇಶ ರಾಜ್ಯಗಳಲ್ಲಿ ಅನಧಿಕೃತ ಗಣಿಗಾರಿಕೆ ತಡೆಗಟ್ಟಲು ರಾಜ್ಯ ಸರ್ಕಾರ ಮತ್ತು ಭಾರತ ಸರ್ಕಾರದ ಪ್ರಾಧಿಕಾರಗಳು ವಿಫಲವಾಗಿರುತ್ತದೆ ಎಂದು ಆರೋಪಿಸಿ ಸಮಾಜ ಪರಿವರ್ತನಾ ಸಮುದಾಯ ಮತ್ತಿತರರು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿ ಸಂಖ್ಯೆ: 562:2009ನ್ನು ದಾಖಲಿಸಿದ್ದು, ಈ ರಿಟ್ ಅರ್ಜಿಯಲ್ಲಿ ಮಾನ್ಯ ನ್ಯಾಯಾಲಯವು ಆದೇಶಿಸಿರುವಂತೆ ಕೇಂದ್ರ ಅಧಿಕಾರಸ್ಥ ಸಮಿತಿಯು ರಾಜ್ಯದ ಬಳ್ಳಾರಿ, ಚಿತ್ರದುರ್ಗ ಮತ್ತು ತುಮಕೂರು ಜಿಲ್ಲೆಗಳಲ್ಲಿನ ಗಣಿಗುತ್ತಿಗೆ ಪ್ರದೇಶಗಳನ್ನು ಜಂಟಿ ಸರ್ವೇ ನಡೆಸಿ ತನ್ನ ಅಂತಿಮ ವರದಿಯನ್ನು ದಿನಾಂಕ 03–02–2012ರಂದು ಮಾನ್ಯ ಸರ್ವೋಚ್ಛ ನ್ಯಾಯಾಲಯಕ್ಕೆ ಸಲ್ಲಿಸಿರುತ್ತದೆ.

ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಬಾಕಿ ಇರುವ ಎಸ್.ಎಲ್.ಎ. (ಸಿವಿಲ್) ಸಂಖ್ಯೆ: 7366–7367:2010 ಮತ್ತು ರಿಟ್ ಅರ್ಜಿ ಸಂಖ್ಯೆ: 562:2009ಗಳಲ್ಲಿ ಕೇಂದ್ರ ಉನ್ನತಾಧಿಕಾರ ಸಮಿತಿಯು ತನ್ನ ವರದಿಯಲ್ಲಿ ಮಾಡಿರುವ ಶಿಫಾರಸ್ಸುಗಳ ಕುರಿತಾಗಿ ರಾಜ್ಯ ಸರ್ಕಾರ ಕೈಗೊಳ್ಳಬೇಕಾಗಿರುವ ಕ್ರಮಗಳ ಕುರಿತು ರಾಜ್ಯ ಸರ್ಕಾರವು ಪ್ರಮಾಣ ಪತ್ರವನ್ನು ಸಲ್ಲಿಸಬೇಕಾಗಿರುತ್ತದೆ. ಈ ನಿಟ್ಟಿನಲ್ಲಿ, ರಾಜ್ಯ ಸರ್ಕಾರವು ಕೈಗೊಳ್ಳಬೇಕಾಗಿರುವ ಕ್ರಮಗಳ ಬಗ್ಗೆ ಸುದೀರ್ಘವಾಗಿ ಪರಿಶೀಲಿಸಿ ವರದಿಯನ್ನು ಸಲ್ಲಿಸಲು ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸುವುದು ಸೂಕ್ತವಾಗಿರುತ್ತದೆ ಎಂದು ಸರ್ಕಾರವು ಮನಗಂಡಿದೆ. ಆದ್ದರಿಂದ, ಈ ಕೆಳಕಂಡ ಆದೇಶ:–

**ಸರ್ಕಾರದ ಆದೇಶ ಸಂಖ್ಯೆ: ಸಿಐ 28 ಎಂಪಿಪಿ 2011, ಬೆಂಗಳೂರು, ದಿನಾಂಕ 09–02–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಮೇರೆಗೆ, ಮಾನ್ಯ ಸರ್ವೋಚ್ಛ ನ್ಯಾಯಾಲಯದಲ್ಲಿ ಬಾಕಿ ಇರುವ ಎಸ್.ಎಲ್.ಎ. (ಸಿವಿಲ್) ಸಂಖ್ಯೆ: 7366–7367:2010 ಮತ್ತು ರಿಟ್ ಅರ್ಜಿ ಸಂಖ್ಯೆ: 562:2009ಗಳಲ್ಲಿ ಕೇಂದ್ರ ಉನ್ನತಾಧಿಕಾರ ಸಮಿತಿಯು ತನ್ನ ವರದಿಯಲ್ಲಿ ಮಾಡಿರುವ ಶಿಫಾರಸ್ಸುಗಳ ಕುರಿತಾಗಿ ರಾಜ್ಯ ಸರ್ಕಾರ ಕೈಗೊಳ್ಳಬೇಕಾಗಿರುವ ಕ್ರಮಗಳ ಕುರಿತು ಸುದೀರ್ಘವಾಗಿ ಪರಿಶೀಲಿಸಿ ವರದಿಯನ್ನು ಸಲ್ಲಿಸಲು ಸರ್ಕಾರಚ ಅಪರ ಮುಖ್ಯ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಈ ಕೆಳಕಂಡ ಸದಸ್ಯರನ್ನೊಳಗೊಂಡ ಸಮಿತಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಸರ್ಕಾರವು ರಚಿಸಿದೆ:–

| | | | |
|---|---|---|---|
| 1. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರು | ... | ಅಧ್ಯಕ್ಷರು |
| 2. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತರು | ... | ಸದಸ್ಯರು |
| 3. | ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ<br>ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ | ... | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ... | ಸದಸ್ಯರು |
| 5. | ಸರ್ಕಾರದ ಕಾರ್ಯದರ್ಶಿ (ಗಣಿ, ಸಪ್ರಕೈ ಮತ್ತು ಜವಳಿ)<br>ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ | ... | ಸದಸ್ಯರು |
| 6. | ನಿರ್ದೇಶಕರು<br>ಗಣಿ ಮತ್ತು ಭೂವಿಜ್ಞಾನ ಇಲಾಖೆ | ... | ಸದಸ್ಯ ಕಾರ್ಯದರ್ಶಿ |

ಸದರಿ ಸಮಿತಿಯ ತನ್ನ ವರದಿಯನ್ನು ನಾಲ್ಕು ದಿನಗಳೊಳಗಾಗಿ ತಪ್ಪದೇ ಸಲ್ಲಿಸುವುದು

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವಿ. ಶಿವಸುಬ್ರಮಣಿ**
ಸರ್ಕಾರದ ಅಧೀನ ಕಾರ್ಯದರ್ಶಿ (ಗಣಿ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 547

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2012 ರ ಪೂರ್ವಭಾವಿ ಸಿದ್ಧತೆಗಳ ಕಾರ್ಯಕ್ರಮಗಳಿಗಾಗಿ 2011–12ನೇ ಸಾಲಿನಲ್ಲಿ 3ನೇ ಮತ್ತು 4ನೇ ತ್ರೈಮಾಸಿಕ ಅವಧಿಗೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ:** 1. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ: ಕೈವಾಇ/ಎಇಪಿ/ಎ1/ವಿ.ಬಂ.ಸ/19/2011–12, ದಿನಾಂಕ 05–09–2011.

2. ಸರ್ಕಾರದ ಆದೇಶ ಸಂಖ್ಯೆ: ಸಿಐ 22 ಎಸ್‌ಪಿಐ 2011 (ಭಾ), ದಿನಾಂಕ 29–09–2011.

3. ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರ ಪತ್ರ ಸಂಖ್ಯೆ: ಕೈವಾಇ/ಎಇಪಿ/ಎ1:19: ಜಿಮ್:2011–12, ದಿನಾಂಕ 30–11–2011.

**ಪ್ರಸ್ತಾವನೆ :**

ಕರ್ನಾಟಕ ಉದ್ಯೋಗ ಮಿತ್ರದ ವತಿಯಿಂದ 2012ರಲ್ಲಿ ನಡೆಸಲು ಉದ್ದೇಶಿಸಲಾಗಿರುವ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶದ ಅಂಗವಾಗಿ 2011–12ನೇ ಸಾಲಿನಲ್ಲಿ ಹೊರದೇಶಗಳಲ್ಲಿ ಹೂಡಿಕೆದಾರರ ಸಮಾವೇಶವನ್ನು ನಡೆಸಲು ಉದ್ದೇಶಿಸಲಾಗಿದ್ದು ಇದಕ್ಕೆ ಪೂರ್ವಭಾವಿಯಾಗಿ ಹೊರದೇಶಗಳಲ್ಲಿ ರೋಡ್ ಶೋಗಳನ್ನು ನಡೆಸಲು ಸಿದ್ಧತೆಗಳನ್ನು ಮಾಡಲು ರೂ. 225.00 ಲಕ್ಷಗಳನ್ನು ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆಯ ಲೆಕ್ಕ ಶೀರ್ಷಿಕೆ "2852–80–800–0–46–125"ರಡಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರಿಗೆ ಮಂಜೂರು ಮಾಡಿ ಬಿಡುಗಡೆ ಮಾಡಲು, ಆಯುಕ್ತರು ಉಲ್ಲೇಖ (1)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಅದರಂತೆ ರೂ. 225.00 ಲಕ್ಷಗಳನ್ನು ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ ಯೋಜನೆಯ ಲೆಕ್ಕ ಶೀರ್ಷಿಕೆ "2852–80–800–0–46–125" ರಡಿ ಅನುದಾನವನ್ನು ಬಿಡುಗಡೆ ಮಾಡಿ ಉಲ್ಲೇಖ (2)ರಲ್ಲಿ ಓದಲಾದ ಆದೇಶವನ್ನು ಹೊರಡಿಸಲಾಗಿದೆ.

ಉಲ್ಲೇಖ (3)ರಲ್ಲಿ ಓದಲಾದ ಪತ್ರದಲ್ಲಿ ಆಯುಕ್ತರು, ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಇವರು, ನಾಲೆಡ್ಜ್ ಪಾರ್ಟ್‌ನರ್, ಬ್ರಾಂಡಿಂಗ್ ಏಜೆನ್ಸಿಗಳಿಗೆ ಪಾವತಿಸಬೇಕಾದ ಮೊತ್ತ, ದೇಶೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ರೋಡ್ ಶೋ, ಜಾಹಿರಾತು, ಮುದ್ರಣ ಮತ್ತು ಪೂರಕ ವೆಚ್ಚಗಳನ್ನು ಭರಿಸಲು 3ನೇ ತ್ರೈಮಾಸಿಕಕ್ಕೆ ರೂ. 7.00 ಕೋಟಿ ಹಾಗೂ 4ನೇ ತ್ರೈಮಾಸಿಕಕ್ಕೆ ರೂ. 6.00 ಕೋಟಿ ಒಟ್ಟು ರೂ. 13.00 ಕೋಟಿಯನ್ನು ಮಂಜೂರು ಮಾಡಲು ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಸಿಐ 22 ಎಸ್‌ಪಿಐ 2011, ಬೆಂಗಳೂರು, ದಿನಾಂಕ 06–02–2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, 2012 ರಲ್ಲಿ ನಡೆಸಲು ಉದ್ದೇಶಿಸಿರುವ ವಿಶ್ವ ಬಂಡವಾಳ ಹೂಡಿಕೆದಾರರ ಸಮಾವೇಶ 2012ರ ಅಂಗವಾಗಿ ನಾಲೆಡ್ಜ್ ಪಾರ್ಟ್‌ನರ್, ಬ್ರಾಂಡಿಂಗ್ ಏಜೆನ್ಸಿಗಳಿಗೆ ಪಾವತಿಸಬೇಕಾದ ಮೊತ್ತ, ದೇಶೀಯ ಮತ್ತು ಅಂತರಾಷ್ಟ್ರೀಯ ಮಟ್ಟದ ರೋಡ್ ಶೋ, ಜಾಹೀರಾತು, ಮುದ್ರಣ ಮತ್ತು ಪೂರಕ ವೆಚ್ಚಗಳನ್ನು ಭರಿಸಲು 3ನೇ ತ್ರೈಮಾಸಿಕಕ್ಕೆ ರೂ. 7.00 ಕೋಟಿ (ರೂ. ಏಳು ಕೋಟಿ ಮಾತ್ರ) ಹಾಗೂ 4ನೇ ತ್ರೈಮಾಸಿಕಕ್ಕೆ ರೂ. 6.00 ಕೋಟಿ (ರೂ. ಅರು ಕೋಟಿ ಮಾತ್ರ) ಒಟ್ಟು ರೂ. 13.00 ಕೋಟಿಯನ್ನು (ರೂ. ಹದಿಮೂರು ಕೋಟಿ ಮಾತ್ರ) ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ.

ಈ ಹಣವನ್ನು ದಿನಾಂಕ 30–3–2012ರವರೆಗೆ ವಾಸ್ತವಿಕ ಅಗತ್ಯತೆಗೆ ತಕ್ಕಂತೆ ಮಾತ್ರ ಪಡೆಯತಕ್ಕದ್ದು. ಮೊತ್ತವನ್ನು ಯಾವುದೇ ಏಜೆನ್ಸಿ ಅಥವಾ ಪಿ.ಡಿ. ಖಾತೆಯಲ್ಲಿ ಉಳಿಸಿಕೊಳ್ಳತಕ್ಕದಲ್ಲ. ಮಂಜೂರಾಗಿರುವ ರೂ. 13.00 ಕೋಟಿಯನ್ನು ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಉದ್ಯೋಗ ಮಿತ್ರ, ಬೆಂಗಳೂರು ಇವರು ಸಲ್ಲಿಸುವ ಪಾವತಿ ರಸೀದಿಯ ಮೇಲೆ ಆಯುಕ್ತರು ಕೈಗಾರಿಕಾಭಿವೃದ್ಧಿ ಹಾಗೂ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ, ಬೆಂಗಳೂರು ರವರ ಮೇಲು ರುಜು ಪಡೆದು ರಾಜ್ಯ ಹುಜೂರು ಖಜಾನೆ, ಬೆಂಗಳೂರು ಅವರಿಂದ ನಗದೀಕರಿಸಿಕೊಳ್ಳುವಂತೆ ಆದೇಶಿಸಿದೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "2852–80–800–0–46(P)–125 ಮೂಲಭೂತ ಸೌಕರ್ಯ ಮತ್ತು ವಾಣಿಜ್ಯ ಉತ್ತೇಜನ" 2011–12ರಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಕೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ 1945 ವೆಚ್ಚ–1/2011, ದಿನಾಂಕ 28–01–2012ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಜ್ಯೋತಿ, ಆರ್.ಜಿ.**
ಪೀಠಾಧಿಕಾರಿ (ತಾಂತ್ರಿಕ ಕೋಶ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 548

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ:** ದಿ ಮೈಸೂರು ಶೂಗರ್ಸ್ ಕಂಪನಿ ಲಿ., ಮಂಡ್ಯ ಈ ಕಾರ್ಖಾನೆಗೆ 2011–12ನೇ ಸಾಲಿನ ಮಿಲ್ ಆಧುನೀಕರಣ ಹಾಗೂ ದುಡಿಯುವ ಬಂಡವಾಳಕ್ಕಾಗಿ ಬಂಡವಾಳ ವೆಚ್ಚಗಳಿಂದ (CAPEX) ಹೆಚ್ಚುವರಿ ಹಣ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ:**
1. ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಶುಗರ್ಸ್ ಕಂಪನಿ ಲಿ., ಮಂಡ್ಯ ಇವರ ಪತ್ರ ಸಂಖ್ಯೆ: ಎಂಎಸ್‌ಕೋ/ಎಂಡಿ/2011/38, ದಿನಾಂಕ 18–11–2011 ಮತ್ತು 07–12–2011.
2. ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 195 ಬಿಆರ್‌ಎಸ್ 2011, ದಿನಾಂಕ 31–01–2012

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಶುಗರ್ಸ್ ಕಂಪನಿ ಲಿ., ಇವರ ಪತ್ರದಲ್ಲಿ ಮಿಲ್ ಆಧುನೀಕರಣದ ಸಲುವಾಗಿ ಬಂಡವಾಳ ವೆಚ್ಚಗಳಿಗಾಗಿ (CAPEX) ಹೆಚ್ಚುವರಿ ರೂ. 35.64 ಕೋಟಿಗಳನ್ನು ಹಾಗೂ ದುಡಿಯುವ ಬಂಡವಾಳವಾಗಿ ರೂ. 11.25 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ದಿ ಮೈಸೂರು ಶುಗರ್ಸ್ ಕಂಪನಿಗೆ 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860–04–190–1–00–211 Investment (plan) ರಡಿ ರೂ. 500.00 ಲೆಕ್ಕಗಳ ಹೆಚ್ಚುವರಿ ಅನುದಾನವನ್ನು ಮಂಜೂರು ಮಾಡಲಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 35 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ 06–02–2012**

ದಿ ಮೈಸೂರು ಶುಗರ್ಸ್ ಕಂಪನಿ ಲಿ., ಮಂಡ್ಯ ಈ ಕಾರ್ಖಾನೆಗೆ 2011–12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860–04–190–1–00–211–ಬಂಡವಾಳ ಹೂಡಿಕೆ (ಯೋಜನೆ) ಇದರಡಿಯಲ್ಲಿ ಒದಗಿಸಿರುವ ಹೆಚ್ಚುವರಿ ಅನುದಾನ ರೂ. 500.00 ಲಕ್ಷಗಳನ್ನು (ಐದು ನೂರು ಲಕ್ಷ ರೂಪಾಯಿಗಳು ಮಾತ್ರ) ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸಹಾಯಕ ನಿರ್ದೇಶಕರು, (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಡ್ಯ ಇವರು ಹಣ ಸೆಳೆಯುವ ಅಧಿಕಾರಿಯಾಗಿದ್ದು, ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸತಕ್ಕದ್ದು.

ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/71/ವೆಚ್ಚ–1/2012, ದಿನಾಂಕ 01–02–2012ರಲ್ಲಿ ನೀಡಿರುವ ಸಹಮಿತಿಯನ್ವಯ ಹೊರಡಿಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಶಿವಶಂಕರ ನಾಯಕ್, ಎಲ್.**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 549

## COMMERCE AND INDUSTRIES SECRETARIAT

**Sub:** Reimbursement of VAT paid on the sale of metro coaches by M/s BEML Ltd., to Bangalore Metro Rail Corporation Ltd., Reg.-

**Read:**
1. G. O. No. FD 37 CSL 2008, dated 07-10-2009
2. Representation of BEML dated 12-12-2011

**Preamble:**

In the Govt. Order read at (1) above, sanction was accorded for reimbursement of tax paid under the KVAT Act by BEML, on its sale of Metro coaches to Bangalore Metro Rail Corporation Ltd.,

The BEML in its representation referred at (20 above has requested for the reimbursement of Rs. 3,35,70,441/- towards the VAT paid for the month of October 2011.

Hence the Order

**Government Order No. CI 237 SPI 2011, Bangalore, dated 06-02-2012**

For the reasons explained above, sanction is hereby accorded for the release of Rs. 335.7 lakhs (Three crore thirty five lakh seventy thousand only) under the Head of A/c "2852-80-800-0-43" (plan) 059-other expenses from the budget 2011-12 towards reimbursement of sales tax to BEML for the month October 2011.

The Asst., General Manager (Finance & Accounts), Bangalore Complex, BEML Ltd., is authorized to draw the amount on payee's receipt duly countersigned by Commissioner for Industrial Development and Director of Industries and Commerce Dept.

This order is issued with reference to Finance Department's Note No. FD 1731 Exp-1I/2011, dated 07-12-2011.

By Order and in the name of the Governor of Karnataka
**Jyothi R.J.**
Desk Officer (Technical Cell)
Commerce & Industries Department

P.R. 550

## ಕಂದಾಯ ಸಚಿವಾಲಯ

**ವಿಷಯ :** ರಾಮನಗರ ಜಿಲ್ಲೆಯ ಚನ್ನಪಟ್ಟಣ ವಿಧಾನ ಸಭಾ ಕ್ಷೇತ್ರದಲ್ಲಿ ಆರಾಧನಾ ಸಮಿತಿ ರಚಿಸುವ ಬಗ್ಗೆ.–

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ ಕಂಇ 77 ಮುಸರ 2008, ದಿನಾಂಕ 31–12–2008

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ರಾಮನಗರ ಜಿಲ್ಲೆಯ ಚನ್ನಪಟ್ಟಣ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಚನ್ನಪಟ್ಟಣ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ರಾಮನಗರ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಚನ್ನಪಟ್ಟಣ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಚನ್ನಪಟ್ಟಣ ತಾಲ್ಲೂಕು | ಸದಸ್ಯ ಕಾರ್ಯದರ್ಶಿ |
| 5 | ಶ್ರೀ ಮದು ಹೆಗಡೆ, ನಂ. 1457/1, ವರದರಾಜ ದೇವಸ್ಥಾನದ ರಸ್ತೆ, ಚನ್ನಪಟ್ಟಣ (ಸಾಮಾನ್ಯ) | ಸದಸ್ಯರು |
| 6 | ಶ್ರೀಮತಿ ಸುಜಾತ ಬಿನ್ ಮಹದೇವ, ಮಾಸ್ತಮ್ಮ ಗುಡಿ ಬೀದಿ, ಮಂಗಳವಾರ ಪೇಟೆ ಚನ್ನಪಟ್ಟಣ (ಮಹಿಳೆ) | ಸದಸ್ಯರು |
| 7 | ಶ್ರೀ ಸಿಂಗ್ರಯ್ಯ ಬಿನ್ ಬೆಟ್ಟಯ್ಯ, ನಂ. 126, ಸಿ.ಎಂ.ಸಿ. ಬಡಾವಣೆ, ಚನ್ನಪಟ್ಟಣ (ಪ.ಜಾತಿ) | ಸದಸ್ಯರು |
| 8 | ಶ್ರೀಮತಿ ಅನಿತಾ ಕೋಂ ರವಿ ಜಲರಾಂ ಸಾಮಿಲ್ ಹಿಂಭಾಗ, ಮಾರುತಿ ಬಡಾವಣೆ, ಚನ್ನಪಟ್ಟಣ (ಪ. ಪಂಗಡ) | ಸದಸ್ಯರು |

ಆ ಹಿನ್ನಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಕಂಇ 25 ಮುಸರ 2012, ಬೆಂಗಳೂರು, ದಿನಾಂಕ 04–02–2012**

ರಾಮನಗರ ಜಿಲ್ಲೆಯ ಚನ್ನಪಟ್ಟಣ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಕಂಇ 77 ಮುಸರ 2008 ದಿನಾಂಕ 31–12–2008ನ್ನು ಭಾಗಶಃ ಮಾರ್ಪಡಿಸಿ, ಅಧಿಕಾರೇತರ ಸದಸ್ಯರ ನೇಮಕಾತಿ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಪ್ರಭು ಸಿ. ಬಿನ್ ಎ. ಚನ್ನೇಗೌಡ, ಗುಡ್ಡೆ ಅವ್ವೇರಹಳ್ಳಿ ಗ್ರಾಮ, ಹೊನ್ನನಾಯಕನಹಳ್ಳಿ ಅಂಚೆ, ಮಳೂರು ಹೋಬಳಿ, ಚನ್ನಪಟ್ಟಣ ತಾಲ್ಲೂಕು | ಸಾಮಾನ್ಯ |
| 2 | ಶ್ರೀಮತಿ ಆಶಾ ಕೆ. ಕೋಂ ರಮೇಶ್ ಎ. ಕೋಟಮಾರನಹಳ್ಳಿ ಗ್ರಾಮ, ಮೈಲನಾಯಕನಹಳ್ಳಿ ಅಂಚೆ, ಮಳೂರು ಹೋಬಳಿ, ಚನ್ನಪಟ್ಟಣ ತಾಲ್ಲೂಕು | ಮಹಿಳೆ |
| 3 | ಶ್ರೀ ನಾಗರಾಜು ಬಿನ್ ಲೇ: ಕಾಳಯ್ಯ, ಮಂಕುಂದ ಗ್ರಾಮ ಮತ್ತು ಅಂಚೆ, ಮಳೂರು ಹೋಬಳಿ, ಚನ್ನಪಟ್ಟಣ ತಾಲ್ಲೂಕು | ಪರಿಶಿಷ್ಟ ಜಾತಿ |
| 4 | ಶ್ರೀಮತಿ ಮಂಜಮ್ಮ ಕೋಂ ಮೂರ್ತಿ, ಇಲಿಗರದೊಡ್ಡಿ, ಮಾಕಳಿ ಅಂಚೆ, ಕಸಬಾ ಹೋಬಳಿ, ಚನ್ನಪಟ್ಟಣ ತಾಲ್ಲೂಕು | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ಥಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಕೆ. ಉಮಾಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ
ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 555

## ಕಂದಾಯ ಸಚಿವಾಲಯ

**ವಿಷಯ :** ಡಾ॥ ಪ್ರಶಾಂತ ಭೀಮಾಶಂಕರ್ ನಾಲ್ವಾರ, ತಹಶೀಲ್ದಾರ್ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧ ದಾಖಲಾದ ಲೋಕಾಯುಕ್ತ ಟ್ರ್ಯಾಪ್ ಪ್ರಕರಣಕ್ಕೆ ಸಂಬಂಧಿಸಿದಂತೆ ಅಭಿಯೋಜನಾ ಮಂಜೂರಾತಿ ನೀಡುವ ಕುರಿತು.

**ಓದಲಾಗಿದೆ :**

1) ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರ ಪತ್ರ ಸಂಖ್ಯೆ: ಲೋಕ್/ಐ.ಎನ್‌ವಿ(ಜಿ)/ಎಲ್–34/ಸಿಆರ್–8/2011/ಹಾವೇರಿ, ದಿನಾಂಕ 18–11–2011.
2) ತನಿಖಾಧಿಕಾರಿಯ ವರದಿ ಸಂಕ್ಯೆ: 08/2011, ದಿನಾಂಕ 10–11–2011
3) ತನಿಖಾ ದಾಖಲೆಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ, ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳು.

**ಪ್ರಸ್ತಾವನೆ :**

ಡಾ॥ ಪ್ರಶಾಂತ ಭೀಮಾಶಂಕರ್ ನಾಲ್ವಾರ, ತಹಶೀಲ್ದಾರ್ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧ ಮೊಕದ್ದಮೆ ಸಂಖ್ಯೆ: 08/2011ರಲ್ಲಿ ಕರ್ನಾಟಕ ಲೋಕಾಯುಕ್ತ, ಹಾವೇರಿ ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯ ಅಂತಿಮ ವರದಿ ಮತ್ತು ತನಿಖಾ ದಾಖಲಾತಿಗಳಾದ ಫಿರ್ಯಾದು, ಪ್ರಥಮ ವರ್ತಮಾನ ವರದಿ, ಪ್ರಾಯೋಗಿಕ ಪಂಚನಾಮೆ, ಜಪ್ತಿ ಪಂಚನಾಮೆ, ಸ್ವತ್ತುಗಳ ಪಟ್ಟಿ ರಾಸಾಯನಿಕ ಪರೀಕ್ಷಕರ ವರದಿ, ಸಾಕ್ಷಿದಾರರ ಹೇಳಿಕೆಗಳು, ಲಂಚದ ಬೇಡಿಕೆಗೆ ಸಂಬಂಧಪಟ್ಟ ಕಡತಗಳನ್ನು ಮೇಲೆ (1)ರಲ್ಲಿ ಓದಲಾದ ದಿನಾಂಕ 18–11–2011ರ ಪತ್ರದೊಂದಿಗೆ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಸರ್ಕಾರಕ್ಕೆ ಕಳುಹಿಸುತ್ತಾ, ಆಪಾದಿತರು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ 1988ರ ಕಲಂ 7, 13(1)(ಡಿ) ಸಹವಾಚನ ಕಲಂ 13 (2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರ್ಮೂಲನಾ ಕಾಯ್ದೆ–1988ರ 19(1)(ಬಿ)ರ ಕಲಂ ಅಡಿಯಲ್ಲಿ ಸರ್ಕಾರದ ಮಂಜೂರಾತಿ ನೀಡಲು ಕೋರಿರುತ್ತಾರೆ.

ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ಕಳುಹಿಸಿಕೊಟ್ಟ ಈ ಕೆಳಕಂಡ ದಾಖಲಾತಿಗಳನ್ನು ಸಕ್ಷಮ ಪ್ರಾಧಿಕಾರಿಯಾದ ಸರ್ಕಾರವು ಪರಿಶೀಲಿಸಿದೆ:–

1) ಶ್ರೀ ಮಾರುತೆಪ್ಪ ರಾಮಕೃಷ್ಣಪ್ಪ ಪವಾರ, ಸಾ: ಡಂಬರಮತ್ತೂರು, ಸವಣೂರು ತಾಲ್ಲೂಕು, ಹಾವೇರಿ ಜಿಲ್ಲೆ ರವರ ಫಿರ್ಯಾದಿ ದಿನಾಂಕ 19–05–2011.
2) ಪ್ರಥಮ ವರ್ತಮಾನ ವರದಿ ಕರ್ನಾಟಕ ಲೋಕಾಯುಕ್ತ, ಹಾವೇರಿ ಪೊಲೀಸ್ ಠಾಣೆ ಪ್ರಕರಣ ಸಂಖ್ಯೆ: 8/2011
3) ವಹಿಸುವಿಕೆ ಪಂಚನಾಮೆ ದಿನಾಂಕ 19–05–2011
4) ಜಪ್ತಿ ಪಂಚನಾಮೆ ದಿನಾಂಕ 21–05–2011
5) ರಾಸಾಯನಿಕ ಪರೀಕ್ಷಕರ ಪರೀಕ್ಷಣಾ ವರದಿ ಸಂಖ್ಯೆ: ಎಲ್.ವಾಯ್.ಕೆ./ಸಿಇ/ಡಬ್ಲ್ಯೂಡಿ/18/2011, ದಿನಾಂಕ 10–08–2011
6) ಕೃತ್ಯ ನಡೆದ ಸ್ಥಳದ ನಕಾಶೆ
7) ಈ ಕೆಳಕಂಡ ಸಾಕ್ಷಿದಾರರ ಹೇಳಿಕೆಗಳು:–
    1) ಮಾರುತೆಪ್ಪ ರಾಮಕೃಷ್ಣಪ್ಪ ಪವಾರ ಇವರ ಹೇಳಿಕೆ ಮತ್ತು ಮುಂದುವರೆದ ಹೇಳಿಕೆ (ಫಿರ್ಯಾದಿ)
    2) ಶ್ರೀ ನಾಗಪ್ಪ ಬಸಪ್ಪ ದೋರಳ್ಳಿ (ಪಂಚಸಾಕ್ಷಿ–1)
    3) ಶ್ರೀ ಜಗದೀಶ ಶಂಕರಯ್ಯ ಮಠದ
    4) ಕು: ಗಂಗಾ ತಂದೆ ಶೇಕರಗೌಡ ಅಂದಾನಗೌಡ್ರ
    5) ಶ್ರೀ ಶಿವಶಂಕರಗೌಡ ತಿಪ್ಪನಗೌಡ ಪಾಟೀಲ
    6) ಶ್ರೀ ರಮೇಶ ಲಕ್ಷಣ ನಾಯಕ
    7) ಶ್ರೀ ಸುರೇಶ ಬಾಲಚಂದ್ರ ಇಟನಾಳ
    8) ಶ್ರೀ ಶಿವಾನಂದ ನಿಂಗಪ್ಪ ಇಚ್ಚಂಗಿ
    9) ಶ್ರೀ ಬಸೀರ್‌ಖಾನ್ ಉಸ್ಮಾನ್‌ಖಾನ್ ಪಠಾಣ
    10) ಶ್ರೀ ವಿನಾಯಕ ಅನಂತರಾವ್ ಕುಲ್ಕರ್ಣಿ
    11) ಶ್ರೀ ರಾಮಪ್ಪ ಹನುಂತಪ್ಪ ದೊಡ್ಡಮನಿ
    12) ಶ್ರೀ ಎಸ್. ಬಿ. ಬಸವನಾಯ್ಕರ, ಮು.ಪೇ.
    13) ಶ್ರೀ ನಿಂಗಪ್ಪ ಗುಡ್ಡಪ್ಪ ಕನವಳ್ಳಿ, ಮು.ಪೇ.
    14) ಶ್ರೀ ಎಂ. ಡಿ. ಮಡಿವಾಳರ, ಮು.ಪೇ. ಕರ್ನಾಟಕ ಲೋಕಾಯುಕ್ತ
    15) ಶ್ರೀ ಎಸ್. ಎನ್. ಹಿರೇಮಠ, ಪೇದೆ, ಕರ್ನಾಟಕ ಲೋಕಾಯುಕ್ತ
    16) ಶ್ರೀ ಕೆ. ಎಂ. ಹಿರೇಮಠ, ಪೇದೆ, ಕರ್ನಾಟಕ ಲೋಕಾಯುಕ್ತ
    17) ಶ್ರೀ ಹೊನ್ನಪ್ಪ ಅಡಿವೆಪ್ಪ, ಬಮ್ಮಕ್ಕನವರ, ಪೇದೆ, ಕರ್ನಾಟಕ ಲೋಕಾಯುಕ್ತ
8) ಲಂಚ ಕೇಳಲು ಆಧಾರವಾದ ಕಡತ ಅಥವಾ ದಾಖಲೆಗಳು
9) ಆಪಾದಿತರಾದ ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರ ಸಮಜಾಯಿಷಿ ಹೇಳಿಕೆ.

ತನಿಖಾಧಿಕಾರಿಗಳಾದ ಶ್ರೀ ಬಿ.ಸಿ. ಉಮಾಪತಿ ಮತ್ತು ಶ್ರೀ ಎನ್. ವಾಸುದೇವರಾಮ, ಆರಕ್ಷಕ ನಿರೀಕ್ಷಕರುಗಳು, ಕರ್ನಾಟಕ ಲೋಕಾಯುಕ್ತ, ಹಾವೇರಿ ಇವರು ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ಕರ್ನಾಟಕ ಲೋಕಾಯುಕ್ತ ಹಾವೇರಿ ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 08/2011ರಲ್ಲಿ ಭ್ರಷ್ಟಾಚಾರ ನಿರೋಧಕ ಕಾಯ್ದೆ 1988ರ ಕಲಂ 7, 13(1)(ಡಿ) ಜೊತೆಯಲ್ಲಿ 13(2)ರ ಅಡಿಯಲ್ಲಿ ದಾಖಲಿಸಿಕೊಂಡಿರುತ್ತಾರೆ.

ಆಪಾದಿತರಾದ ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರು ಫಿರ್ಯಾದಿಯಾದ ಶ್ರೀಮಾರುತೆಪ್ಪ ರಾಮಕೃಷ್ಣಪ್ಪ ಪವಾರ ಇವರು ಹೊಲವನ್ನು ಖರೀದಿ ಮಾಡಿದ್ದು, ಅದನ್ನು ತನ್ನ ಹೆಸರಿಗೆ ರಿಜಿಸ್ಟರ್ ಮಾಡಿಸಿಕೊಳ್ಳಲು ಕೃಷಿ ಕಾರ್ಮಿಕ ಎಂಬ ದೃಢೀಕರಣ ಪತ್ರವನ್ನು ಕೊಡುವಂತೆ ಉಪನೊಂದಣಿ ಕಛೇರಿಯ ಅಧಿಕಾರಿಗಳು ತಿಳಿಸಿದಂತೆ ಫಿರ್ಯಾದಿಯು ಕೃಷಿ ಕಾರ್ಮಿಕ ದೃಢೀಕರಣ ಪತ್ರವನ್ನು ನೀಡುವಂತೆ ಕೋರಿ ಆಪಾದಿತರಿಗೆ ನೆಮ್ಮದಿ ಕೇಂದ್ರ ಮೂಲಕ ಅರ್ಜಿ ಕೊಟ್ಟಿದ್ದ ಸ್ವಲ್ಪ ದಿನಗಳ ನಂತರ ಆಪಾದಿತರನ್ನು ಭೇಟಿ ಮಾಡಿದಾಗ ಆಪಾದಿತರು ಕೃಷಿ ಕಾರ್ಮಿಕ ಪತ್ರವನ್ನು ತಾವೇ ಮಾಡಿಕೊಡುತ್ತೇನೆಂದು ರೂ. 10,000/–ಗಳ ಲಂಚದ ಬೇಡಿಕೆ ಇಟ್ಟು ಕೊನೆಗೆ ಮಾತುಕತೆಯಾಗಿ ರೂ. 6,000/–ಗಳ ಲಂಚದ ಹಣ ಕೇಳಿರುತ್ತಾರೆ. ಫಿರ್ಯಾದಿಯು ಲಂಚವನ್ನು ಕೊಡಲು ಬಯಸದ ಕಾರಣ ಸದರಿ ಅಧಿಕಾರಿಯ ವಿರುದ್ಧ ಕಾನೂನು ಕ್ರಮ ಕೈಗೊಳ್ಳುವ ಬಗ್ಗೆ ದೂರನ್ನು ಸಲ್ಲಿಸಿದ್ದು ಇರುತ್ತದೆ. ಸದರಿ ದೂರಿನಂತೆ ತನಿಖಾಧಿಕಾರಿಗಳು ಟ್ರ್ಯಾಪ್ ಬಲೆ ಬೀಸುವ ಮೊದಲಿನ ಎಲ್ಲಾ ಔಚಿತ್ಯಪೂರ್ಣ ಸಿದ್ಧತಾ ಕಾರ್ಯಗಳನ್ನು ನೆರವೇರಿಸಿದ ನಂತರ ದಿನಾಂಕ 21–05–2011ರಂದು ತಹಶೀಲ್ದಾರರ ಕಛೇರಿ, ಸವಣೂರು, ಹಾವೇರಿ ಜಿಲ್ಲೆ ಇಲಿ ಬೀಸಿದ ಟ್ರ್ಯಾಪ್ ಯಶಸ್ವಿಯಾಗಿ ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರು ಅಕ್ರಮ ಸಂಭಾವನೆಯಾದ ಆರು ಸಾವಿರ ರೂಪಾಯಿಗಳನ್ನು ಸದರಿ ಸರ್ಕಾರಿ ಕೆಲಸವನ್ನು ಮಾಡಿಕೊಡಲು ಕೇಳಿ ಪಡೆಯುತ್ತಿದ್ದಾಗ ಸಿಕ್ಕಿಹಾಕಿಕೊಂಡಿರುತ್ತಾರೆ. ಹಣವನ್ನು ಇಟ್ಟ ಟೇಬಲ್ ಕ್ಲಾಥನ ಭಾಗ ಮತ್ತು ಹಣದ ಮೇಲೆ ಮುಚ್ಚಿದ ತಹಶೀಲ್ದಾರರ ಡೈರಿಯ ಹಿಂಭಾಗವನ್ನು ಹತ್ತಿ ತುಣಿಕನಿಂದ ಒರೆಸಿ ಅದನ್ನು ಸೋಡಿಯಂ ಕಾರ್ಬೋನೇಟ್ ದ್ರಾವಣದಲ್ಲಿ ತೊಳೆದಾಗ ಅದು ತಿಳಿ ಗುಲಾಬಿ ಬಣಕ್ಕೆ ತಿರುಗಿದ್ದು, ರಾಸಾಯನಿಕ ತಜ್ಞರ ಪರೀಕ್ಷಣಾ ವರದಿಯಿಂದಲೂ ಸಹ ದೃಢಪಟ್ಟಿರುತ್ತದೆ. ಆಪಾದಿತರು ಹಣವನ್ನು ತನ್ನ ಟೇಬಲ್ ಮೇಲೆ ಇಡಲು ಹೇಳಿ ಪಿರ್ಯಾಧಿ ಲಂಚದ ಹಣ ಇಟ್ಟ ನಂತರ ತಮ್ಮ ಡೈರಿಯನ್ನು ಹಣದ ಮೇಲೆ ಆಪಾದಿತರೇ ಇಟ್ಟಿರುವುದು ದೃಡಪಟ್ಟಿರುವುದು ಸ್ಪಷ್ಟವಾಗುತ್ತದೆ. ಅಕ್ರಮ ಸಂಭಾವನೆ ಆರು ಸಾವಿರ ರೂಪಾಯಿಗಳನ್ನು ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರಿಂದ ತಹಶೀಲ್ದಾರರ ಕಛೇರಿ, ಸವಣೂರ, ಹಾವೇರಿ ಜಿಲ್ಲೆ ಇಲ್ಲಿ ಪಂಚರ ಸಮಕ್ಷಮ ವಶಪಡಿಕೊಳ್ಳಲಾಗಿದೆ.

ಹೆಚ್ಚುವರಿ ಪೊಲೀಸ್ ಮಹಾ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ಇವರು ತನಿಖಾ ವರದಿಯೊಂದಿಗೆ ಸರ್ಕಾರಕ್ಕೆ ಕಳುಹಿಸಲಾದ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರು ಒಬ್ಬ ಜವಾಬ್ದಾರಿಯುತ ಸರ್ಕಾರಿ ಅಧಿಕಾರಿಯಾಗಿದ್ದು, ಫಿರ್ಯಾದಿಯು ಕೃಷಿ ಕಾರ್ಮಿಕ ದೃಢೀಕರಣ ಪತ್ರವನ್ನು ನೀಡುವಂತೆ ಕೋರಿ ನೆಮ್ಮದಿ ಕೇಂದ್ರ ಮೂಲಕ ಅರ್ಜಿ ಸಲ್ಲಿಸಿದ್ದರ ಸಂಬಂಧ ಆಪಾದಿತರು ಕೃಷಿ ಕಾರ್ಮಿಕ ಪತ್ರವನ್ನು ತಾವೇ ಮಾಡಿಕೊಡುತ್ತೇನೆಂದು ರೂ. 10,000/–ಗಳ ಲಂಚದ ಬೇಡಿಕೆ ಇಟ್ಟು ಕೊನೆಗೆ ಮಾತುಕತೆಯಾಗಿ ರೂ. 6,000/–ಗಳ ಲಂಚದ ಹಣ ಸ್ವೀಕರಿಸುತ್ತಿದ್ದಾಗ ಹಾವೇರಿ ಲೋಕಾಯುಕ್ತ ಪೊಲೀಸರು ಬೀಸಿದ ಬಲೆಗೆ ಸಿಲುಕಿ ನಂತರ ಬಂಧನಕ್ಕೊಳಗಾಗಿರುವ ಅಂಶವನ್ನು ಸರ್ಕಾರವು ಗಮನಿಸಿದೆ.

ಈ ಎಲ್ಲಾ ಕಾರಣಗಳಿಂದ ಅಪಾದಿತರು ಭ್ರಷ್ಟಾಚಾರ ನಿರೋಧ ಕಾಯ್ದೆ–1988ರ ಕಲಂ 7, 13(1)(ಡಿ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧವನ್ನು ಎಸಗಿರುವುದು ಮೇಲ್ನೋಟಕ್ಕೆ ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಆದ್ದರಿಂದ ಇವರನ್ನು ಭ್ರಷ್ಟಾಚಾರ ನಿರೋಧ ಕಾಯ್ದೆ–1988ರ ಅನ್ವಯ ಕಲಂ 7, 13(1)(ಡಿ) ಜೊತೆಗೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯಕ ಎಂದು ಸರ್ಕಾರ ಮನಗಂಡಿದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತನನ್ನು ಹುದ್ದೆಯಿಂದ ತೆಗೆದು ಹಾಕಲು ಅಧಿಕಾರವುಳ್ಳದ್ದಾಗಿರುತ್ತದೆ. ಆದ್ದರಿಂದ ಭ್ರಷ್ಟಾಚಾರ ನಿರೋಧ ಕಾಯ್ದೆ–1988 ಕಲಂ 19(1)(ಬಿ)ರ ಅಡಿ ಆಪಾದಿತ ಸಾರ್ವಜನಿಕ ಅಧಿಕಾರಿ ಡಾ॥ ಪ್ರಶಾಂತ್ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಕಲಂ 7 ಮತ್ತು 13(1)(ಡಿ) ಜೊತೆಗೆ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರ ಹೊಂದಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 29 ಎಡಿಇ 2011, ಬೆಂಗಳೂರು, ದಿನಾಂಕ 04–02–2012**

ಆರೋಪಿಯಾದ ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಹುದ್ದೆಯಿಂದ ತೆಗದು ಹಾಕುವ (ವಜಾಮಾಡುವ) ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಡಾ॥ ಪ್ರಶಾಂತ ಭೀಮಾಶಂಕರ್ ನಾಲವಾರ, ತಹಶೀಲ್ದಾರ (ಹಾಲಿ ಅಮಾನತ್ತಿನಲ್ಲಿ) ಇವರನ್ನು ಭ್ರಷ್ಟಾಚಾರ ನಿರೋಧ ಕಾಯ್ದೆ–1988ರ ಕಲಂ 7 13(1)(ಡಿ) ಜೊತೆಯಲ್ಲಿ ಓದಲಾದ ಕಲಂ 13(2)ರ ಪ್ರಕಾರ ಎಸಗಿರುವ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಅಭಿಯೋಜನೆಗೆ ಒಳಪಡಿಸಲು ಭ್ರಷ್ಟಾಚಾರ ನಿರೋಧ ಕಾಯ್ದೆ 1988ರ ಕಲಂ 19(1)(ಬಿ) ರನ್ವಯ ಮಂಜೂರಾತಿಯನ್ನು ನೀಡಿದೆ.

ಮುಂದುವರೆದು, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ನಿಯಮ 18ರ ಪ್ರಕಾರ ಸರ್ಕಾರದ ಪರವಾಗಿ ಅಥವಾ ಸರ್ಕಾರದಿಂದ ಹೊರಡಿಸಲಾದ ಎಲ್ಲಾ ಆದೇಶಗಳನ್ನು ಅಥವಾ ಲೇಖನಗಳನ್ನು ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಬೇಕು ಅಥವಾ ಹೊರಡಿಸುವಂತೆ ಮಾಡಬೇಕು.

ಅದೇ ನಿಯಮಾವಳಿಯ ನಿಯಮ 19(1)ರ ಪ್ರಕಾರ ಕರ್ನಾಟಕ ಸರ್ಕಾರದ ರಾಜ್ಯಪಾಲರ ಹೆಸರಿನಲ್ಲಿ ಹೊರಡಿಸಿದ ಆದೇಶಗಳು ಮತ್ತು ಲೇಖನಗಳು ಒಬ್ಬ ಅಧೀನ ಕಾರ್ಯದರ್ಶಿಯ ಸಹಿಯಿಂದ ಅಧಿಕೃತಗೊಳ್ಳಬೇಕು ಹಾಗೂ ಅಂತಹ ಸಹಿಯು ಅಂತಹ ಆದೇಶ ಅಥವಾ ಲೇಖನವನ್ನು ಸರಿಯಾಗಿ ಅಧಿಕೃತಗೊಳಿಸುತ್ತದೆ.

ಆದ್ದರಿಂದ, ಕರ್ನಾಟಕ ಸರ್ಕಾರದ (ವ್ಯವಹಾರ) ನಿಯಮಾವಳಿ 1977ರ ಈ ಮೇಲ್ಕಂಡ ಆದೇಶವನ್ನು ದಿನಾಂಕ 04–02–2012 ರಂದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
ಎನ್. ಗೋಪಾಲಯ್ಯ
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 556

## ಕಂದಾಯ ಸಚಿವಾಲಯ

**ತಿದ್ದುಪಡಿ**

ಸಂಖ್ಯೆ: ಆರ್‌ಡಿ 58 ಎಡಿಇ 2010, ಬೆಂಗಳೂರು, ದಿನಾಂಕ 17–01–2012

ಸರ್ಕಾರದ ಆದೇಶ ಸಂಖ್ಯೆ: ಕಂಇ 58 ಎಡಿಇ 2010, ದಿನಾಂಕ 07–12–2011ರ ಆದೇಶದಲ್ಲಿ 'ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 114(2)(ಬಿ)(i)' ಎಂದು ಇರುವಲ್ಲಿ 'ಕರ್ನಾಟಕ ನಾಗರೀಕ ಸೇವಾ ನಿಯಮಗಳು 1958ರ ನಿಯಮ 214(2)(ಬಿ)(i)' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು–3)

ಪಿ.ಆರ್. 557

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ಜಯನಗರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.–

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ ಕಂಇ 04 ಮುಸರ 2009, ದಿನಾಂಕ 02–02–2009

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲೆಯ ಜಯನಗರ ವಿಧಾನಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಈ ಕೆಳಕಂಡವರೊಂದಿಗೆ ರಚಿಸಲು ಆದೇಶಿಸಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ಜಯನಗರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ನಗರ ಜಿಲ್ಲೆ. | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಬೆಂಗಳೂರು ದಕ್ಷಿಣ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಬೆಂಗಳೂರು ದಕ್ಷಿಣ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |
| 5 | ಶ್ರೀ ರಮೇಶ್ ರಾಜು, ನಂ. 11, 32ನೇ ಅಡ್ಡರಸ್ತೆ, 10ನೇ ಮುಖ್ಯರಸ್ತೆ, ಜಯನಗರ 4ನೇ ಬಡಾವಣೆ, ಬೆಂಗಳೂರು–11 (ಸಾಮಾನ್ಯ) | ಸದಸ್ಯರು |
| 6 | ಶ್ರೀಮತಿ ಕುಮುದ ಕೋಂ ದಿ.ಚಾ.ಮು. ಕೃಷ್ಣಯ್ಯಂಗಾರ್, ನಂ. 453, 44ನೇ ಅಡ್ಡ ರಸ್ತೆ, 8ನೇ ಬಡಾವಣೆ, ಜಯನಗರ, ಬೆಂಗಳೂರು–82. (ಮಹಿಳೆ) | ಸದಸ್ಯರು |
| 7 | ಶ್ರೀ ವಸಂತಪ್ಪ, ನಂ. 9, 2ನೇ ಮುಖ್ಯರಸ್ತೆ, ಭೈರಸಂದ್ರ, ಜಯನಗರ, 1ನೇ ಬಡಾವಣೆ ಪೂರ್ವ, ಬೆಂಗಳೂರು. (ಪ.ಜಾತಿ) | ಸದಸ್ಯರು |
| 8 | ಶ್ರೀ ಪಿ. ಹನುಮಂತರಾಜು ಬಿನ್ ಪಾಪಯ್ಯ, ನಂ. 152/1, ಸಾರಕ್ಕಿ ಗ್ರಾಮದ ಸುಬ್ಬಮ್ಮ ಛತ್ರ, ಜೆ.ಪಿ. ನಗರ, 1ನೇ ಹಂತ, ಬೆಂಗಳೂರು–78. (ಪ.ಪಂಗಡ) | ಸದಸ್ಯರು |

ಆ ಹಿನ್ನೆಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಕಂಇ 04 ಮುಸರ 2012, ಬೆಂಗಳೂರು, ದಿನಾಂಕ 06–02–2012**

ಬೆಂಗಳೂರು ನಗರ ಜಿಲ್ಲೆಯ ಜಯನಗರ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಕಂಇ 04 ಮುಸರ 2009 ದಿನಾಂಕ 02–02–2009ನ್ನು ಭಾಗಶಃ ಮಾರ್ಪಡಿಸಿ, ಅಧಿಕಾರೇತರ ಸದಸ್ಯರ ನೇಮಕಾತಿ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಅನಂತರಾಜು, ನಂ. 131, 12ನೇ ಅಡ್ಡರಸ್ತೆ, 6ನೇ ಮೇನ್, ಜೆ.ಪಿ.ನಗರ, 3ನೇ ಹಂತ, ಬೆಂಗಳೂರು. | ಸಾಮಾನ್ಯ |
| 2 | ಶ್ರೀಮತಿ ಈಶ್ವರಿ ನಾಗರಾಜ್, ನಂ. 211, 8ನೇ ಮುಖ್ಯರಸ್ತೆ, 2ನೇ ಅಡ್ಡರಸ್ತೆ, ಹೊಸ ಬಿ.ಡಿ.ಎ. ಬಡಾವಣೆ, ಬೈರಸಂದ್ರ, ಜಯನಗರ 1ನೇ ಬ್ಲಾಕ್ ಪೂರ್ವ, ಬೆಂಗಳೂರು. | ಮಹಿಳೆ |
| 3 | ಶ್ರೀ ನಾಗೇಶ್, ನಂ. 14, ಹಳೆ ಗುರಪ್ಪನಪಾಳ್ಯ, ಅವಲಮ್ಮನ ದೇವಸ್ಥಾನದ ಹಿಂಭಾಗ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29. | ಪರಿಶಿಷ್ಟ ಜಾತಿ |
| 4 | ಶ್ರೀ ಆಂಜನಪ್ಪ, ನಂ. 152, 12ನೇ ಅಡ್ಡರಸ್ತೆ, ಸುಬ್ಬಮ್ಮ ಸರ್ಕಲ್, ಸಾರಕ್ಕಿ, ಜೆ.ಪಿ. ನಗರ, 1ನೇ ಹಂತ, ಬೆಂಗಳೂರು–78. | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ, ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಮುಜರಾಯಿ)

ಪಿ.ಆರ್. 558

## ಕಂದಾಯ ಸಚಿವಾಲಯ

**ತಿದ್ದುಪಡಿ**

ಸಂಖ್ಯೆ: ಕಂಇ 07 ಮುಸರ 2011, ಬೆಂಗಳೂರು, ದಿನಾಂಕ 07–02–2012

ಸರ್ಕಾರಿ ಆದೇಶ ಸಂಖ್ಯೆ: ಕಂಇ 07 ಮುಸರ 2011, ದಿನಾಂಕ 21–09–2011ರಲ್ಲಿ "ಬೆಳಗಾಂ ಜಿಲ್ಲೆ, ಬೈಲಹೊಂಗಲ ವಿಧಾನಸಭಾ ಕ್ಷೇತ್ರ" ಎಂಬುದರ ಬದಲಾಗಿ "ಬೆಳಗಾಂ ಜಿಲ್ಲೆ ಕಿತ್ತೂರು ವಿಧಾನಸಭಾ ಕ್ಷೇತ್ರ" ಎಂಬುದನ್ನು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 559 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ಹೆಬ್ಬಾಳ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.–

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ ಕಂಇ 19 ಮುಸರ 2009, ದಿನಾಂಕ 18–02–2009

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲೆಯ ಹೆಬ್ಬಾಳ ವಿಧಾನ ಸಭಾ ಕ್ಷೇತ್ರದ ಆರಾಧನಾ ಸಮಿತಿಯನ್ನು ಕೆಳಕಂಡವರೊಂದಿಗೆ ರಚಿಸಲು ಆದೇಶಿಲಾಗಿತ್ತು.

| | | |
|---|---|---|
| 1 | ಶ್ರೀ ಎಲ್. ರವೀಂದ್ರಕುಮಾರ್, ಮುನಿರಾಮಣ್ಣ ಬ್ಲಾಕ್, ಗಂಗಾನಗರ, ಬೆಂಗಳೂರು | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ನಗರ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಬೆಂಗಳೂರು ಉತ್ತರ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಬೆಂಗಳೂರು ಉತ್ತರ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |
| 5 | ಶ್ರೀ ಸುರೇಶ್ ರೆಡ್ಡಿ ಪಿ. ನಂ. 23, ಶ್ರೀ ಶಾರದ ನಿಲಯ, ಮೊದಲನೇ ಕ್ರಾಸ್, ಮಠದಹಳ್ಳಿ, ಆರ್.ಟಿ. ನಗರ ಅಂಚೆ, ಬೆಂಗಳೂರು–560 032. (ಸಾಮಾನ್ಯ) | ಸದಸ್ಯರು |
| 6 | ಶ್ರೀಮತಿ ಅನ್ನಪೂರ್ಣ ಕನಕರಾಜ್, ನಂ. 102, ಮುನೇಶ್ವರ ಟೆಂಪಲ್ ಸ್ಟ್ರೀಟ್, ನಾಗಶೆಟ್ಟಿಹಳ್ಳಿ, ಸಂಜಯನಗರ ಪೋಸ್ಟ್, ಆರ್.ಎಂ.ವಿ., 2ನೇ ಹಂತ, ಬೆಂಗಳೂರು–560094. (ಮಹಿಳೆ) | ಸದಸ್ಯರು |
| 7 | ಶ್ರೀ ಮುನಿಸ್ವಾಮಿ, ನಂ. 90/1, ಕೆಂಪಯ್ಯ ಲೇಔಟ್, 6ನೇ ಕ್ರಾಸ್, ಜೋಳನಾಯಕನಹಳ್ಳಿ, ಆರ್.ಟಿ. ನಗರ ಅಂಚೆ, ಬೆಂಗಳೂರು–560 032. (ಪ.ಜಾತಿ) | ಸದಸ್ಯರು |
| 8 | ಶ್ರೀ ಸುಧಾಕರ ತಂದೆ ಪೊನ್ನುಸ್ವಾಮಿ, ನಂ. 508, 7ನೇ ಕ್ರಾಸ್, ಸುಮಂಗಲಿ ಸೇವಾಶ್ರಮ ಹತ್ತಿರ, ಚೋಳನಗರ, ಆರ್.ಟಿ.ನಗರ ಪೋಸ್ಟ್, ಬೆಂಗಳೂರು–560 032. (ಪ.ಪಂಗಡ) | ಸದಸ್ಯರು |

ಆ ಹಿನ್ನಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಕಂಇ 05 ಮುಸರ 2012, ಬೆಂಗಳೂರು, ದಿನಾಂಕ 06–02–2012**

ಬೆಂಗಳೂರು ನಗರ ಜಿಲ್ಲೆಯ ಹೆಬ್ಬಾಳ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ: ಕಂಇ 19 ಮುಸರ 2009 ದಿನಾಂಕ 16–02–2009ನ್ನು ಭಾಗಶಃ ಮಾರ್ಪಡಿಸಿ ಅಧಿಕಾರೇತರ ಸದಸ್ಯರ ನೇಮಕಾತಿ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಸುಬ್ಬೇಗೌಡ, ನಂ. 1, ರೂಪ ನಿಲಯ, ಮುನೇಶ್ವರ ದೇವಸ್ಥಾನದ ರಸ್ತೆ, ನಾಗಶೆಟ್ಟಿಹಳ್ಳಿ, ಬೆಂಗಳೂರು–560 032. | ಸಾಮಾನ್ಯ |
| 2 | ಶ್ರೀಮತಿ ಅನ್ನಪೂರ್ಣಮ್ಮ, ನಂ. 102, ಮುನೇಶ್ವರ ದೇವಸ್ಥಾನದ ರಸ್ತೆ, ನಾಗಶೆಟ್ಟಿಹಳ್ಳಿ, ಬೆಂಗಳೂರು–560 032 | ಮಹಿಳೆ |
| 3 | ಶ್ರೀ ಲೋಕೇಶ್ ಕುಮಾರ್, ನಂ. 16, 9ನೇ ಮುಖ್ಯರಸ್ತೆ, 2ನೇ ಅಡ್ಡರಸ್ತೆ, ಜಿ.ಎನ್. ದೇವಸ್ಥಾನ, ಮಠದಹಳ್ಳಿ, ಬೆಂಗಳೂರು–560 032. | ಪರಿಶಿಷ್ಟ ಜಾತಿ |
| 4 | ಶ್ರೀ ಹೆಚ್. ವೆಂಕಟೇಶ್, ನಂ. 15, 1ನೇ ಮುಖ್ಯರಸ್ತೆ, ಮಠದಹಳ್ಳಿ, ಆರ್.ಟಿ. ನಗರ ಅಂಚೆ, ಬೆಂಗಳೂರು–560 032. | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03–02–2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 560 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** ಬೆಂಗಳೂರು ನಗರ ಜಿಲ್ಲೆಯ ರಾಜಾಜಿನಗರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿ ರಚಿಸುವ ಬಗ್ಗೆ.–

**ಓದಲಾಗಿದೆ :** ಸರ್ಕಾರದ ಆದೇಶ ಸಂಖ್ಯೆ ಕಂಇ 11 ಮುಸರ 2009, ದಿನಾಂಕ 04-02-2009

**ಪ್ರಸ್ತಾವನೆ :**

ಮೇಲೆ ಓದಲಾದ ಆದೇಶದಲ್ಲಿ ಬೆಂಗಳೂರು ನಗರ ಜಿಲ್ಲೆಯ ರಾಜಾಜಿನಗರ ವಿಧಾನ ಸಭಾ ಕ್ಷೇತ್ರಕ್ಕೆ ಆರಾಧನಾ ಸಮಿತಿಯನ್ನು ಕೆಳಕಂಡವರೊಂದಿಗೆ ರಚಿಸಲು ಆದೇಶಿಲಾಗಿತ್ತು.

| | | |
|---|---|---|
| 1 | ಮಾನ್ಯ ವಿಧಾನಸಭಾ ಸದಸ್ಯರು, ರಾಜಾಜಿನಗರ ವಿಧಾನಸಭಾ ಕ್ಷೇತ್ರ | ಅಧ್ಯಕ್ಷರು |
| 2 | ಕಾರ್ಯನಿರ್ವಾಹಕ ಅಭಿಯಂತರು, ಪಂಚಾಯತ್ ರಾಜ್ ಇಂಜಿನಿಯರಿಂಗ್ ವಿಭಾಗ, ಬೆಂಗಳೂರು ನಗರ ಜಿಲ್ಲೆ | ಸದಸ್ಯರು |
| 3 | ಕಾರ್ಯನಿರ್ವಾಹಕ ಅಧಿಕಾರಿ, ತಾಲ್ಲೂಕು ಪಂಚಾಯತ್, ಸಂಬಂಧಿಸಿದ ತಾಲ್ಲೂಕು | ಸದಸ್ಯರು |
| 4 | ತಹಶೀಲ್ದಾರ್, ಸಂಬಂಧಿಸಿದ ತಾಲ್ಲೂಕು, ಬೆಂಗಳೂರು ನಗರ ಜಿಲ್ಲೆ | ಸದಸ್ಯ ಕಾರ್ಯದರ್ಶಿ |
| 5 | ಶ್ರೀ ದಳವಾಯಿ ಎನ್. ಎಂ., ನಂ. 43, 3 'ಬಿ' ಮೈನ್, 1ನೇ ಸ್ಟೇಜ್, 2ನೇ ಹಂತ, ಮಂಜುನಾಥನಗರ, ಬೆಂಗಳೂರು-560 010. (ಸಾಮಾನ್ಯ) | ಸದಸ್ಯರು |
| 6 | ಶ್ರೀಮತಿ ಲಲಿತಮ್ಮ, ನಂ. 84, ಶಾನ್‌ಬಾಗ್ ಕಾಂಪೌಂಡು ಹತ್ತಿರ, 12ನೇ ಮೈನ್ ರೋಡ್, ಶಿವನಗರ, ಬೆಂಗಳೂರು-560 010. (ಮಹಿಳೆ) | ಸದಸ್ಯರು |
| 7 | ಶ್ರೀ ಪ್ರಭಾಕರನ್ ಕೆ. ನಂ. 7/70/17, 2ನೇ ಅಡ್ಡರಸ್ತೆ, 6ನೇ ಬ್ಲಾಕ್, ಡಾ|| ರಾಜ್ ಕುಮಾರ್ ರಸ್ತೆ, ಬೆಂಗಳೂರು-560 010. (ಪ.ಜಾತಿ) | ಸದಸ್ಯರು |
| 8 | ಶ್ರೀ ವಿಜೇಂದ್ರ, ನಂ. 183, 12ನೇ ಮುಖ್ಯರಸ್ತೆ, ಮಂಜುನಾಥನಗರ, ಪಶ್ಚಿಮ ಕಾರ್ಡ್ ರಸ್ತೆ, 3ನೇ ಹಂತ, ರಾಜಾಜಿನಗರ, ಬೆಂಗಳೂರು-560 010. (ಪ.ಪಂಗಡ) | ಸದಸ್ಯರು |

ಆ ಹಿನ್ನೆಲೆಯಲ್ಲಿ ಪುನಃ ಪರಿಶೀಲಿಸಿ, ಕೆಳಗಿನಂತೆ ಆದೇಶಿಸಿದೆ

**ಸರ್ಕಾರದ ಆದೇಶ ಸಂಖ್ಯೆ: ಕಂಇ 03 ಮುಸರ 2012, ಬೆಂಗಳೂರು, ದಿನಾಂಕ 06-02-2012**

ಬೆಂಗಳೂರು ನಗರ ಜಿಲ್ಲೆಯ ರಾಜಾಜಿನಗರ ವಿಧಾನಸಭಾ ಕ್ಷೇತ್ರಕ್ಕೆ ಸಂಬಂಧಿಸಿದ ಸರ್ಕಾರಿ ಆದೇಶ ಸಂಖ್ಯೆ ಕಂಇ 11 ಮುಸರ 2009 ದಿನಾಂಕ 04-02-2009ನ್ನು ಭಾಗಶಃ ಮಾರ್ಪಡಿಸಿ ಅಧಿಕಾರೇತರ ಸದಸ್ಯರ ನೇಮಕಾತಿ ರದ್ದುಪಡಿಸಿ, ಸದರಿ ಆರಾಧನಾ ಸಮಿತಿಗೆ ಈ ಕೆಳಕಂಡ ವ್ಯಕ್ತಿಗಳನ್ನು ಅಧಿಕಾರೇತರ ಸದಸ್ಯರನ್ನಾಗಿ ಈ ತಕ್ಷಣದಿಂದ ಜಾರಿಗೆ ಬರುವಂತೆ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಹೆಸರು/ವಿಳಾಸ | ಪ್ರವರ್ಗ |
|---|---|---|
| 1 | ಶ್ರೀ ಕೆ. ಆರ್. ಹರಿಪ್ರಸಾದ, ನಂ. 811, 14ನೇ ಮುಖ್ಯರಸ್ತೆ, 3ನೇ ವಿಭಾಗ, ರಾಜಾಜಿನಗರ, ಬೆಂಗಳೂರು-10. | ಸಾಮಾನ್ಯ |
| 2 | ಶ್ರೀಮತಿ ಪದ್ಮಾ ದೇಸಾಯಿ, 21ನೇ ಅಡ್ಡರಸ್ತೆ, 2ನೇ ವಿಭಾಗ, ರಾಜಾಜಿನಗರ, ಬೆಂಗಳೂರು-10 | ಮಹಿಳೆ |
| 3 | ಶ್ರೀ ಕೆ. ವೆಂಕಟೇಶ್, ನಂ. 157, 3ನೇ ಅಡ್ಡರಸ್ತೆ, ದಯಾನಂದನಗರ, ಶ್ರೀರಾಮಪುರಂ, ಬೆಂಗಳೂರು-21. | ಪರಿಶಿಷ್ಟ ಜಾತಿ |
| 4 | ಶ್ರೀ ಕೊಳದೇಯಪ್ಪನ್, ನಂ. 156, 2ನೇ 'ಸಿ' ಮುಖ್ಯರಸ್ತೆ, ಬೋವಿಕಾಲೋನಿ, ಬಸವೇಶ್ವರನಗರ, ಬೆಂಗಳೂರು-79. | ಪರಿಶಿಷ್ಟ ಪಂಗಡ |

ಸದರಿ ಸಮಿತಿಯ ಅಧಿಕಾರೇತರ ಸದಸ್ಯರು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 2 ಎಸ್‌ಆರ್‌ಎ 2000, ದಿನಾಂಕ 03-02-2001ರ ಪ್ರಕಾರ ಸಂಬಂಧಪಟ್ಟ ಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಸಮಿತಿಯು ಐದು ವರ್ಷ ಅಥವಾ ಮುಂದಿನ ಆದೇಶ ಹೊರಡಿಸುವವರೆಗೆ; ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಅಸ್ತಿತ್ವದಲ್ಲಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಕೆ. ಉಮಾಪತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 561 ಕಂದಾಯ ಇಲಾಖೆ (ಮುಜರಾಯಿ)

## ಕಂದಾಯ ಸಚಿವಾಲಯ

**ವಿಷಯ :** 2011ನೇ ಸಾಲಿನಲ್ಲಿ ರಾಜ್ಯದಲ್ಲಿ ಪ್ರಕೃತಿ ವಿಕೋಪದಿಂದ ಉಂಟಾಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.–

**ಓದಲಾಗಿದೆ :** ಜಿಲ್ಲಾಧಿಕಾರಿಗಳ ಬೇಡಿಕೆ ಪತ್ರಗಳು

**ಪ್ರಸ್ತಾವನೆ :**

2011ನೇ ಸಾಲಿನಲ್ಲಿ ರಾಜ್ಯದಲ್ಲಿ ಪ್ರಕೃತಿ ವಿಕೋಪದಿಂದ, ಉಂಟಾಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು, ಮೇಲೆ ಓದಲಾದ ಪತ್ರಗಳಲ್ಲಿ, ಕೊಡಗು ಮತ್ತು ಉತ್ತರ ಕನ್ನಡ ಜಿಲ್ಲಾಧಿಕಾರಿಗಳು ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವಂತೆ ಬೇಡಿಕೆ ಸಲ್ಲಿಸಿರುತ್ತಾರೆ. ಈ ಹಿನ್ನೆಲೆಯಲ್ಲಿ, ಜಿಲ್ಲಾಧಿಕಾರಿಗಳ ಪ್ರಸ್ತಾವನೆಗಳನ್ನು ಕೂಲಂಕಷವಾಗಿ, ಪರಿಶೀಲಿಸಿ, ರಾಜ್ಯದಲ್ಲಿ ಉಂಟಾಗಿರುವ ಬರ ಪರಿಸ್ಥಿತಿಯನ್ನು ನಿಭಾಯಿಸಲು ರಾಜ್ಯ ವಿಪತ್ತು, ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 190 ಟಿಎನ್‌ಆರ್ 2011 (2), ಬೆಂಗಳೂರು, ದಿನಾಂಕ 01-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಕೃತಿ ವಿಕೋಪದಿಂದ, ಉಂಟಾಗಿರುವ ಹಾನಿಗಳಿಗೆ ತುರ್ತು ಪರಿಹಾರ ಕ್ರಮ ಕೈಗೊಳ್ಳಲು, ರಾಜ್ಯ ವಿಪತ್ತು ಪರಿಹಾರ ನಿಧಿಯಿಂದ ಈ ಕೆಳಕಂಡಂತೆ ಜಿಲ್ಲೆಗಳ ಜಿಲ್ಲಾಧಿಕಾರಿಗಳಿಗೆ ಅನುದಾನ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

| ಕ್ರ.ಸಂ. | ಜಿಲ್ಲೆಯ ಹೆಸರು | ಬಿಡುಗಡೆ ಮಾಡಿದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಕೊಡಗು | 100.00 |
| 2 | ಉತ್ತರ ಕನ್ನಡ | 50.00 |
| | **ಒಟ್ಟು** | **150.00** |
| | | *(ರೂ. ಒಂದುನೂರ ಐವತ್ತು ಲಕ್ಷ ಮಾತ್ರ)* |

1. ಮೇಲಿನಂತೆ ಬಿಡುಗಡೆ ಮಾಡಿದ ಹಣವನ್ನು ಈ ಕೆಳಕಂಡಂತೆ ಆದ್ಯತೆಯ ಮೇರೆಗೆ ಉಪಗೋಗಿಸುವುದು
   ಅ) ಮಾನವ/ಪ್ರಾಣಿ ಜೀವಹಾನಿ
   ಆ) ಬೆಳೆ ಹಾನಿ
   ಇ) ಕುಡಿಯುವ ನೀರಿನ ವ್ಯವಸ್ಥೆ
   ಈ) ಜಾನುವಾರುಗಳ ಸಂರಕ್ಷಣೆ
   ಉ) ಮೂಲಭೂತ ಸೌಕರ್ಯಗಳಿಗೆ ತುರ್ತು ರಿಪೇರಿ
2. ಕೇಂದ್ರ ಸರ್ಕಾರವು ಹೊರಡಿಸಿರುವ ಮಾರ್ಗಸೂಚಿಗಳ ಪ್ರಕಾರ ವೆಚ್ಚ ಮಾಡುವುದು
3. ಅನುದಾನ ಲಭ್ಯತೆ ಇಲ್ಲದೇ ಯಾವುದೇ ದುರಸ್ತಿ ಕಾಮಗಾರಿಗಳನ್ನು ಎಸ್.ಡಿ.ಆರ್.ಎಫ್/ಎನ್‌ಸಿಸಿಎಫ್ ಅಡಿಯಲ್ಲಿ ಕೈಗೊಳ್ಳುವಂತಿಲ್ಲ ಹಾಗೂ ಕಾಮಗಾರಿಗಳನ್ನು ಬಿಡುಗಡೆಯಾದ ಅನುದಾನಕ್ಕೆ ಸೀಮಿತಗೊಳಿಸುವುದು.
4. ಪ್ರಕೃತಿ ವಿಕೋಪದಿಂದ ಆದಂತಹ ವಿಪತ್ತು ಹಾನಿಗೆ ಮಾತ್ರ ಪರಿಹಾರ ನೀಡುವುದು

ಸದರಿ ವೆಚ್ಚವನ್ನು ವಿಧಾನಸೌಧದ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಶಾಖೆಯಲ್ಲಿರುವ ಸಿ.ಆರ್.ಎಫ್. ಉಳಿಕೆ ಮೊತ್ತದಿಂದ ಭರಿಸುವುದು. ಅನುದಾನ ವೆಚ್ಚ ಮಾಡುವಾಗ ಸರ್ಕಾರವು ಕಾಲಕಾಲಕ್ಕೆ ಹೊರಡಿಸಿರುವ ಮಾರ್ಗಸೂಚಿ/ಆದೇಶ/ಸುತ್ತೋಲೆಗಳನ್ನು ಪಾಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಸ್. ಎಂ. ಆನಂದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ವಿಪತ್ತು, ನಿರ್ವಹಣೆ ಮತ್ತು ಸೇವೆಗಳು-2)

ಪಿ.ಆರ್. 562

## ಕಂದಾಯ ಸಚಿವಾಲಯ

### ಸುತ್ತೋಲೆ

ಸಂಖ್ಯೆ: ಕಂಇ 57 ಎಎಸ್‌ಡಿ 2012, ಬೆಂಗಳೂರು, ದಿನಾಂಕ 07-02-2012

ಕಂದಾಯ ಇಲಾಖೆಯ ತಾಲ್ಲೂಕು ಮಟ್ಟದಲ್ಲಿನ ತಾಲ್ಲೂಕು ಕಛೇರಿಗಳಲ್ಲಿ ಮತ್ತು ಉಪ ವಿಭಾಗ ಮಟ್ಟದ ಉಪ ವಿಭಾಗಾಧಿಕಾರಿಗಳ ಕಛೇರಿಗಳಲ್ಲಿನ ಕಾರ್ಯಭಾರ ಜವಾಬ್ದಾರಿಯನ್ನು ಕಡಿಮೆ ಮಾಡಿ ಅಧಿಕಾರ ವಿಕೇಂದ್ರೀಕರಣಗೊಳಿಸಿ, 176 ತಾಲ್ಲೂಕುಗಳಲ್ಲಿ ತಹಶೀಲ್ದಾರ್ ಕಾರ್ಯಾಲಯದಲ್ಲಿರುವ ಒಂದು ಶಿರಸ್ತೇದಾರ್ ಹುದ್ದೆಯನ್ನು ಮತ್ತು 52 ಉಪ ವಿಭಾಗಾಧಿಕಾರಿಗಳ ಕಾರ್ಯಲಯದಲ್ಲಿರುವ ಒಂದು ವ್ಯವಸ್ಥಾಪಕರ ಹುದ್ದೆಯನ್ನು ಒಳಗೊಂಡಂತೆ ಒಟ್ಟು 228 ಶಿರಸ್ತೇದಾರ್/ಉಪ ತಹಶೀಲ್ದಾರ್‌ಗಳ ಹುದ್ದೆಯನ್ನು ತಹಶೀಲ್ದಾರ್ ಗ್ರೇಡ್-2 ಅಥವಾ ಗ್ರೇಡ್-ಬಿ ಹುದ್ದೆಗೆ ಸರ್ಕಾರವು ಸಂಖ್ಯೆ: ಕಂಇ 209 ಎಂವಿಎಸ್ 2002(1) ದಿನಾಂಕ 3-6-2011ರ ಸರ್ಕಾರಿ ಆದೇಶದಲ್ಲಿ ಉನ್ನತೀಕರಿಸಲಾಗಿರುತ್ತದೆ.

ತಾಲ್ಲೂಕು ಮಟ್ಟದಲ್ಲಿ ತಹಶೀಲ್ದಾರ್ (ರೆಗ್ಯುಲರ್) ಮತ್ತು ತಹಶೀಲ್ದಾರ್ (ಗ್ರೇಡ್-2) ಇವರುಗಳು ಮತ್ತು ಉಪ ವಿಭಾಗಾಧಿಕಾರಿಗಳ ಕಛೇರಿಯಲ್ಲಿ ತಹಶೀಲ್ದಾರ್ ಗ್ರೇಡ್-2 ವೃಂದದ ಅಧಿಕಾರಿಗಳು ನಿರ್ವಹಿಸಬೇಕಾಗಿರುವ ಕಾರ್ಯಭಾರ ಹಂಚಿಕೆಯನ್ನು ಸಂಖ್ಯೆ: ಕಂಇ 209 ಎಂವಿಎಸ್ 2002(1) ದಿನಾಂಕ 3-12-2011ರ ಸರ್ಕಾರಿ ಆದೇಶದಲ್ಲಿ ಹೊರಡಿಸಲಾಗಿದೆ.

ಸರ್ಕಾರವು ದಿನಾಂಕ 30-1-2012ರ ಸಂಖ್ಯೆ: ಕಂಇ 301 ಎಎಸ್‌ಡಿ 2011ರ ಅಧಿಸೂಚನೆಯಲ್ಲಿ 190 ಶಿರಸ್ತೇದಾರ್/ಉಪ ತಹಶೀಲ್ದಾರ್‌ಗಳಿಗೆ ತಹಶೀಲ್ದಾರ್ ಗ್ರೇಡ್-2 ವೃಂದಕ್ಕೆ ಮುಂಬಡ್ತಿ ನೀಡಿ, ಉನ್ನತೀಕರಿಸಿದ 74 ತಹಶೀಲ್ದಾರ್ ಗ್ರೇಡ್-2 ಹುದ್ದೆಗಳಿಗೆ ಮಾತ್ರ ನೇಮಕ ಮಾಡಿರುತ್ತದೆ. ಇನ್ನು 154 ತಹಶೀಲ್ದಾರ್ ಗ್ರೇಡ್-2 ವೃಂದದ ಹುದ್ದೆಗಳಿಗೆ ನೇಮಕ ಮಾಡುವ ಪ್ರಕ್ರಿಯೆಯು ಮುಂದುವರೆದಿದೆ. ಆದ್ದರಿಂದ, ಮುಂಬಡ್ತಿ ನೀಡಿ ತೈನಾತಿಸಿರುವ 74 ತಾಲ್ಲೂಕುಗಳಲ್ಲಿ ದಿನಾಂಕ 3-12-2011ರ ಸರ್ಕಾರಿ ಅದೇಶದಲ್ಲಿ ಕಾರ್ಯ ಹಂಚಿಕೆ ಮಾಡಿರುವಂತೆ ಗ್ರೇಡ್-2 ತಹಶೀಲ್ದಾರ್‌ಗಳು ಕ್ರಮ ವಹಿಸತಕ್ಕದ್ದು ಮತ್ತು ಇನ್ನು ಬಾಕಿ ಉಳಿದಿರುವ 154 ತಾಲ್ಲೂಕುಗಳಲ್ಲಿ ತಹಶೀಲ್ದಾರ್ ಗ್ರೇಡ್-2 ವೃಂದಕ್ಕೆ ನೇಮಕಾತಿ ಮಾಡುವವರೆಗೆ ಈ ಹಿಂದೆ ಇದ್ದಂತಹ ವ್ಯವಸ್ಥೆಯಲ್ಲಿಯೇ ಅಂದರೆ ರೆಗ್ಯುಲರ್ ತಹಶೀಲ್ದಾರರೇ ಎಲ್ಲಾ ಕಾರ್ಯಗಳನ್ನು ನಿರ್ವಹಿಸಿಕೊಂಡು ಹೋಗತಕ್ಕದು

**ಎನ್. ಗೋಪಾಲಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ

ಕಂದಾಯ ಇಲಾಖೆ (ಸೇವೆಗಳು-3)

ಪಿ.ಆರ್. 563

## INFRASTRUCTURE DEVELOPMENT SECRETARIAT

**Sub :** Construction of Kolar – Chickballapura Gauge Conversion Railway line-reg.

**Read :**
1. G.O. No. IDD 35 NSW 09, dated 24-04-2009
2. G.O. No. IDD 80 NSW 09, dated 03-09-2010
3. G.O. No. IDD 80 NSW 09, dated 23-02-2011
4. G.O. No. IDD 80 NSW 09, dated 23-05-2011
5. Letter No. W63/CN/BNC/MPIC & UC, dated 28-12-2012 from Chief Engineer/Con/Plg., SWR, Bangalore.

**Preamble:**

Railways are one of the most convenient and widely used means of travel in India and also a very critical component in logistics. The use of rail network for freight and passenger transport has the potential to reduce road congestion, improve safety, improve economic efficiencies and reduce environmental impacts. To increase the rail density in the State, the State Govt. has taken initiatives to take up rail projects on cost sharing basis (50:50, 2/3$^{rd}$ and 1/3$^{rd}$ etc., ) since 2002, Keeping in view the facts that the allocation for railways has to be increased for early commissioning of railway projects the State Government has decided to undertake some of the ongoing railway projects in the State on cost sharing basis.

2. In G.O. read at (1) above, Government of Karnataka has taken up the balance work of Kolar-Chickballapura gauge conversion railway project on 50:50 cost sharing basis between Gok and Railway This project was sanctioned during 2006-07 and the total length of the project is 90 kms & cost of the project is Rs. 287.99 crore. The expenditure incurred by SWR is Rs. 107.83 crore, the project is being taken up from 2010-11 onwards on cost sharing basis between Railways and GoK.

3. In G.O. read at (2) to (4) above, Gok has released Rs. 60.00 crores towards guage conversion of Kolar-Chikkaballapur railway line.

4. In the letter read at Sl. No. (5) above, the Chief Engineer, South Western Railway, Bangalore has stated that out of 90 km stretch Kolar-Chintamani Section is targeted for completion by March 2012 and Chintamani-Chikkaballapura section (43 kms) work under progress and expected to be completed by June 2012. The entire project is likely to be commissioned in the month July 2012 and requested to release Rs. 30.00 crores towards Kolar-Chickballapur gauge conversion railway line project.

5. The proposal of South western Railways has been examined in detail and issued the following order.

**Government Order No. IDD 80 NSW 2009, Bangalore, dated 06-02-2012**

Under the circumstances explained in the preamble, Government are pleased to release Rs. 30.00 crores (Rupees Thirty Crore only) being the part of the share of Gok.

2. The expenditure shall be met under the Head of Account "5465-01-190-3-05-211 (Plan) New Cost Sharing project investments" 2011-12.

3. South Western Railways shall furnish the physical progress and Utilization Certificate

4. The Chief Executive Officer, K-RIDE, Bangalore is authorized to draw the amount on a payee's receipt duly countersigned by the Under Secretary to Government, Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Western Railway, Bangalore.

5. This order is issued with the concurrence of Finance Department vide, Note No FD 122 Exp-I/2012, dated 31-01-2012.

By Order and in the name of the Governor of Karnataka

**S. J. Sampath Kumar**

Under Secretary to Government

P.R. 564 Infrastructure Development Department

## INFRASTRUCTURE DEVELOPMENT SECRETARIAT

**Sub :** Release of State Share towards Bidar Gulbarga New Railway line Project-reg.

**Read :**
1. G.O. No. IDD 12 NSW 2004, dated 05-09-2007
2. G.O. No. IDD 12 NSW 2004, dated 28-09-2007
3. G.O. No. IDD 12 NSW 2004, dated 21-01-2008
4. G.O. No. IDD 12 NSW 2008, dated 13-05-2008
5. G.O. No. IDD 12 NSW 2008, dated 26-06-2009
6. G.O. No. IDD 13 NSW 2008, dated 21-08-2010
7. G.O. No. IDD 13 NSW 2008, dated 12-11-2010
8. G.O. No. IDD 13 NSW 2008, dated 09-02-2011
9. G.O. No. IDD 13 NSW 2008, dated 23-05-2011
10. Letter No. W.CoN/338/C/90/Vol.VI, dated 22-12-2011 from the Chief Engineer/Con./I, South Central Railway, Secunderabad.

**Preamble:**

In the Government Order read at Sl. No. (1) above, the State Government has accorded sanction for taking up Bidar-Gulbarga New railway line project on 50:50 cost sharing basis between the Ministry of Railways and Government of Karnataka.

2. In the G.O. read at Sl. No. (2) to (9) above, the Government of Karnataka has released Rs. 155.00 crores towards the share of the State Government for Bidar-Gulbarga New railway line project.

3. In the letter read at Sl. No. (10) above, the Chief Engineer, South Central Railway, Secunderabad, has submitted the Utilization Certificate and requested to release Rs. 21.00 Crores to complete the Bidar-Gulbarga new railway line project.

4. The proposal of the South Central Railways, Secunderabad has been examined in detail and issued the following order.

**Government Order No. IDD 13 NSW 2008, Bangalore, dated 06-02-2012**

Under the circumstances explained in the preamble, Government of Karnataka are pleased to release Rs. 21.00 crores (Rupees twenty one crores only) towards the share of the Government of Karnataka for Bidar-Gulbarga new railway line project.

2. The expenditure shall be met under the Head of Account **5465-01-190-3-10-133-(plan)** cost sharing Bidar-Gulbarga New Railway line (SDP) during 2011-12.

3. The South Central Railway, Secunderabad shall furnish Utilization Certificate and physical progress of the project.

4. The Chief Executive Officer, K-RIDE, Bangalore is authorized to draw the amount on a payee's receipt duly countersigned by the Under Secretary to Government Infrastructure Development Department and K-RIDE shall in turn deposit the same with the Financial Advisor and Chief Accounts Officer (Construction), South Central Railway, Secunderabad.

5. This order is issued with the concurrence of Finance Department vide U.O. Note No. FD 119 Exp-I/2012, dated 30-01-2012.

By Order and in the name of the Governor of Karnataka

**S. J. Sampath Kumar**

Under Secretary to Government

P.R. 565

Infrastructure Development Department

## ಸಮಾಜ ಕಲ್ಯಾಣ ಸಚಿವಾಲಯ

**ತಿದ್ದುಪಡಿ**

**ಸಂಖ್ಯೆ: ಸಕಇ 39 ಎಸ್‌ಟಿಸಿ 2011, ದಿನಾಂಕ: 25–01–2012**

ದಿನಾಂಕ: 21–12–2010ರ ಇದೇ ಸಮಸಂಖ್ಯೆಯ ಸರ್ಕಾರದ ಆದೇಶದ ಪರಿಣಿತರ ಸಮಿತಿಯ ತಃಖ್ತೆಯ ಕ್ರಮ ಸಂಖ್ಯೆ 3ರಲ್ಲಿ 'ಸರ್ಕಾರದ ಅಧೀನ ಕಾರ್ಯದರ್ಶಿ. ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವಾ ನಿಯಮಗಳು) ವಿಧಾನಸೌಧ' ಎಂಬುದರ ಬದಲಿಗೆ 'ನಿರ್ದೇಶಕರು, ಡಾ: ಬಿ.ಆರ್.ಅಂಬೇಡ್ಕರ್ ಸಂಶೋಧನಾ ಸಂಸ್ಥೆ, ಬೆಂಗಳೂರು' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 573

**ಎಸ್. ಲೋಕನಾಥರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ–2

ಸಮಾಜ ಕಲ್ಯಾಣ ಇಲಾಖೆ.

## ಯೋಜನೆ ಕಾರ್ಮಿಕ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ)ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
**1.** ಸರ್ಕಾರದ ಆದೇಶ ಸಂಖ್ಯೆ : ಯೋಇ: 309: ಪಿಟಿಪಿ: 94, ದಿನಾಂಕ: 07–08–1995
**2.** ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ: ರಾಕಾ/ನಾನಿ/705/2011, ದಿ: 14.11.2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರ ಪತ್ರದಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಶಿಫಾರಸ್ಸಿನ ಮೇರೆಗೆ ಮೈಸೂರು ಜಿಲ್ಲೆಯ, ಪಿರಿಯಾ ಪಟ್ಟಣ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನಾಮ ನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 136 ಯೋವಿವಿ 2011 ಬೆಂಗಳೂರು, ದಿನಾಂಕ: 06, ಫೆಬ್ರವರಿ, 2012.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಮೈಸೂರು ಜಿಲ್ಲೆಯ, ಪಿರಿಯಾ ಪಟ್ಟಣ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಕೆಳಕಂಡ ಅಧಿಕಾರೇತರ ಸದಸ್ಯರನ್ನು ಅನುಷ್ಠಾನಗೊಳಿಸಲು ನಾಮ ನಿರ್ದೇಶನ ಮಾಡಲಾಗಿದೆ.

ಮೈಸೂರು ಜಿಲ್ಲೆ, ಪಿರಿಯಾಪಟ್ಟಣ ತಾಲ್ಲೂಕ್ ಕೆ.ಡಿ.ಪಿ ಗೆ,

| ಕ್ರ.ಸಂ | ಹೆಸರು ಮತ್ತು ವಿಳಾಸ | ವರ್ಗ |
|---|---|---|
| 1 | ಶ್ರೀ ಎಂ.ಎಂ. ರಾಜೇಗೌಡ ಬಿನ್ ಮರೀಗೌಡ, ಮೂಡಲಕೊಪ್ಪಲು, ರಾಜನಬಿಳಗುಲಿ ಅಂಚೆ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ | ಸಾಮಾನ್ಯ |
| 2 | ಶ್ರೀಮತಿ ಜಯಮ್ಮ ಕೋಂ ಶಿವಣ್ಣ, ಬಿ.ಎಂ. ರಸ್ತೆ, ಕೊಪ್ಪ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ | ಮಹಿಳೆ |
| 3 | ಶ್ರೀ ಜಿ. ರಾಮಕೃಷ್ಣ ಬಿನ್ ಗಿರಿಯಾಬೋವಿ, ಮಾಕನಹಳ್ಳಿಪಾಳ್ಯ. ಕಂಪಲಾಪುರ ಅಂಚೆ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ | ಎಸ್. ಸಿ |
| 4 | ಶ್ರೀ ಜಹೂರ್ ಆಲಿ ಬಿನ್ ಮೀರ್ ಆಲಿ ಖಾನ್, ಸಣ್ಣಯ್ಯನ ಬೀದಿ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ | ಅ.ಸಂ |
| 5 | ಶ್ರೀ ಕೆ.ಎಸ್. ಲೋಕಪಾಲಯ್ಯ ಬಿನ್ ಶ್ರೀಕಂಠಚಾರ್, ದೊರೆಕೆರೆ ಗ್ರಾಮ, ರಾವಂದೂರು ಅಂಚೆ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ | ಬಿ.ಸಿ.ಎಂ |
| 6 | ಶ್ರೀ ರಾಮೇಗೌಡ ಬಿನ್ ಪುಟ್ಟೇಗೌಡ, ಮುನುಗನಹಳ್ಳಿ, ಕಣಗಾಲು ಅಂಚೆ, ಪಿರಿಯಾಪಟ್ಟಣ ತಾಲ್ಲೂಕು, ಮೈಸೂರು ಜಿಲ್ಲೆ | ಸಾಮಾನ್ಯ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಜಿ. ಮುಳಕೂರ**

ಸರ್ಕಾರದ ಅಧೀನ ಕಾರ್ಯದರ್ಶಿ, 1 & 2

ಪಿ.ಆರ್. 574 ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಯೋಜನೆ ಕಾರ್ಮಿಕ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವನ್ನು ಸೇರಿದಂತೆ)ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ : ಯೋಇ: 309: ಪಿಟಿಪಿ: 94, ದಿನಾಂಕ: 07-08-1995
2. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರಗಳ ಸಂಖ್ಯೆ: ರಾಕಾ/ನಾನಿ/ಸಂಖ್ಯೆ:ರಾಕಾ/ನಾನಿ/11/2011 ದಿ: 18.01.2011
3. ಸರ್ಕಾರದ ಆದೇಶ ಸಂಖ್ಯೆ: ಯೋಇ: 68 ಯೋವಿವಿ:2009, ದಿ:12.4.2011
4. ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರ ಸಂಖ್ಯೆ:ರಾಕಾ/ನಾನಿ/813/2011 ದಿ: 18-11-2011

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಜಿಲ್ಲಾ ಮಟ್ಟದ/ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮೇಲೆ ಓದಲಾದ (2)ರಲ್ಲಿರುವ ಪತ್ರಗಳಲ್ಲಿ ಅಧ್ಯಕ್ಷರು, ಭಾರತೀಯ ಜನತಾ ಪಾರ್ಟಿ, ಬೆಂಗಳೂರು ಇವರ ಪತ್ರಗಳಲ್ಲಿನ ಶಿಫಾರಸ್ಸು ಮೇರೆಗೆ ಮೇಲೆ ಓದಲಾದ (3)ರ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆಯ ಭದ್ರಾವತಿ ತಾಲ್ಲೂಕು ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಈ ಕೆಳಕಂಡ ಅಧಿಕಾರೇತರ ಸದಸ್ಯರುಗಳನ್ನು ನಾಮನಿರ್ದೇಶನ ಮಾಡಲಾಗಿತ್ತು.

ಶಿವಮೊಗ್ಗ ಜಿಲ್ಲೆ, ಭದ್ರಾವತಿ ತಾಲ್ಲೂಕು

| ಕ್ರ.ಸಂ | ಹೆಸರು | ವರ್ಗ |
|---|---|---|
| 1 | ಶ್ರೀ ಸೋಮಶೇಖರ್ ಬಿನ್ ನಂಜುಂಡಪ್ಪ ಪದ್ಮೇನಹಳ್ಳಿ, ಶೆಟ್ಟಿಹಳ್ಳಿ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಸಾಮಾನ್ಯ |
| 2 | ಶ್ರೀ ಎಂ.ಆರ್. ಬಸವರಾಜ್ ಬಿನ್ ರಂಗೋಜಿರಾವ್ ಮಲ್ಲಾಪುರ, ಮಂಗೋಟೆ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಸಾಮಾನ್ಯ |
| 3 | ಶ್ರೀ ಆನಂದ ಬಿನ್ ರಾಮಚಂದ್ರಪ್ಪ ಮತಿಗಟ್ಟ, ಶೆಟ್ಟಿಹಳ್ಳಿ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಪ.ಜಾ |
| 4 | ಶ್ರೀಮತಿ ಕವಿತಾ ಕೋಂ. ಬಸವರಾಜ್ ಕಂಬದಾಳ್ ಹೊಸೂರ್, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಮಹಿಳೆ |
| 5 | ಶ್ರೀ ಗೌತಮ್ ಬಿನ್ ಜುಗ್ ರಾಜ್ "ಸಂಗೀತಾ ಜ್ಯೂವೆಲರ್ಸ್" ಹಳೆನಗರ ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಅ.ಸಂ. |
| 6 | ಶ್ರೀ ನಾರಾಯಣ ಬಿನ್ ಸಣ್ಣರಂಗಯ್ಯ ಹೊಸಮನೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ. | ಹಿಂ.ವ |

ಮೇಲೆ ಓದಲಾದ (4)ರ ಪತ್ರದಲ್ಲಿ ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ಕೆ.ಡಿ.ಪಿ.ಗೆ ಶ್ರೀ ಆನಂದ ಬಿನ್ ರಾಮಚಂದ್ರಪ್ಪ, (ಎಸ್.ಸಿ.) ಮತಿಘಟ್ಟ, ಶೆಟ್ಟಿಹಳ್ಳಿ, ಭದ್ರಾವತಿ ತಾಲ್ಲೂಕು ಇವರು ಮರಣ ಹೊಂದಿದ ಕಾರಣ ಇವರ ಬದಲಾಗಿ ಶ್ರೀ ರವಿ ಬಿನ್ ರಾಮಣ್ಣ (ಎಸ್.ಸಿ) ಕೆ,ಹೆಚ್. ನಗರ, ಸುಣ್ಣದ ಹಳ್ಳಿ ಅಂಚೆ, ಭದ್ರಾವತಿ ತಾಲ್ಲೂಕು ಇವರನ್ನು ನಾಮನಿರ್ದೇಶನ ಮಾಡಲು ಸರ್ಕಾರ ತೀರ್ಮಾನಿಸಿ ಅದರಂತೆ ಈ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಯೋಇ 62 ಯೋವಿವಿ 2009 ಬೆಂಗಳೂರು, ದಿನಾಂಕ: 09–02–2012.**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈಗಾಗಲೇ ನಾಮ ನಿರ್ದೇಶನ ಮಾಡಿದ ಶ್ರೀ ಆನಂದ ಬಿನ್ ರಾಮಚಂದ್ರಪ್ಪ, ಇವರ ಮರಣ ಹೊಂದಿದ ಕಾರಣ ಈ ಕೆಳಕಂಡವರನ್ನು ಶಿವಮೊಗ್ಗ ಜಿಲ್ಲೆ ಭದ್ರಾವತಿ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರನ್ನಾಗಿ ನೇಮಿಸಲಾಗಿದೆ.

ಶಿವಮೊಗ್ಗ ಜಿಲ್ಲೆ. ಭದ್ರಾವತಿ ತಾಲ್ಲೂಕು.

| ಕ್ರ.ಸಂ. | ಹೆಸರು | ವರ್ಗ |
|---|---|---|
| 1. | ಶ್ರೀ ರವಿ. ಬಿನ್. ರಾಮಣ್ಣ ಕೆ.ಹೆಚ್. ನಗರ, ಸುಣ್ಣದ ಹಳ್ಳಿ ಅಂಚೆ, ಭದ್ರಾವತಿ ತಾಲ್ಲೂಕು, ಶಿವಮೊಗ್ಗ ಜಿಲ್ಲೆ | ಎಸ್.ಸಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಜಿ. ಮುಳಕೂರ**
ಸರ್ಕಾರದ ಅಧೀನ ಕಾರ್ಯದರ್ಶಿ, 1 & 2
ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

ಪಿ.ಆರ್. 575

## FOREST, ECOLOGY AND ENVIRONMENT SECRETARIAT

**Sub :** Diversion of 172.53 ha. of forest land for construction of 400 KV DC line CKT-I) from Nandikur (Udupi) Generating Station to 400/220 KV Receiving Station at Shantigrama (Hassan) I favour of the Executive Engineer, Elec., Major Works Division, Karnataka Power Transmission Corporation Limited, Hassan-Regarding.

**Read :**
1. Letter No. A5(3) GFL. CR. 15/07-08, dated: 05/03/2010 of the Principal Chief Conservator of Forest, Bangalore.
2. State Government letter No. FEE 20 FGL 200, dated: 15/04/2010.
3. Letter No. F. No. 8-29/2010-FC, 17th Februvary 2011 of Government of India, Ministry of Environment and Forests, New Delhi.
4. Letter No. A5(2) GFL. CR. 15/07-08, dated: 18/05/2011 of the Principal Chief Conservator of Forest, Bangalore.
5. State Government letter No. FEE 20 FGL 2011, dated: 15/06/2011.
6. Letter No. F. No.8-29/2010-FC, 17th January 2012 of Government of India, Ministry of Environment and Forests, New Delhi.

**Preamble :**

The Principal Chief Conservator of Forests, Bangalore vide letter dated 05.03.2010 read at (1) above had submitted a proposal to obtain the approval of Government of india under Section 2 of the Forest (Conservation) Act, 1980 for diversion of 172.53 ha. Of forest land for construction) of 400 KV DC line (CKT-I) from Nandikur (Udupi) Generating Station to 400/220 KV Receiving Station at Shantigrama (Hassan) in favour of the Executive Engineer, Elec., Major Works Division, Karnataka Power Transmission Corporation Limited, Hassan subject to certain conditions.

2. Accordingly, the proposal was recommended to Government of India for approval vide State Government letter dated 15/04/2010 read at (2) above.

3. The Government of India Ministry of Environment and Forests, New Delhi agreed to the proposal in principle (Stage-I) under Section 2 of the Forest (Conservation) Act, 1980 vide their letter dated: 17th February 2011 read at (3) above, subject to fulfillment of certain conditions.

4. The Principal Chief Conservator of Forests submitted the compliance report vide his leter dated 18.05.2011 read at (4) above and the same has been sent to Government of India vide State Government letter dated: 15/06/2011 read at (5) above.

5. The Government of India, Ministry of Environment and Forests, New Delhi vide their letter dated 17th January 2012 read at (6) above has conveyed their approval (Stage-II) under Section 2 of the Forests (Conservation) Act, 1980 for diversion of 172.53 ha. of forest land for Construction of 400 KV DC line (CKT-I) From Nandikur (Udupi) Generating Station to 400/220 KV Receiving Station at Shantigrama (Hassan) in favour of the Executive Engineer, Elec., Major works Division, Karnataka Power Transmission Corporation Limited, Hassan subject to certain conditions.

The proposal has been examined in detail and hence the order.

**GOVERNMENT ORDER NO. FEE 20 FGL 2010, BANGALORE, DATED 01/02/2012.**

In the circumstances explained above in the preamble, the Government is pleased to accord sanction under Section 2 of the Forest (Conservation) Act, 1980 for diversion of 172.53 ha. of forest land for contruction of 400 KV DC line (CKT-I) from Nandikur (Udupi) Generating Station to 400220 KV Receiving Station at Shantigrama (Hassan) in favour of the Executive Engineer, Elec., Major Works Division, Karnataka Power Transmission Corporation Limited, Hassan subject to the following conditions:

1. The legal status of the diverted forest land shall remain unchanged.
2. i) Compendatory afforestation (CA) over 172.53 of non-forest land shall be under taken at the user agency.

ii) The above land should be notified as Rf/PF under the Indian Forest Act or relevant State Act within six months from the date of issue of this approval.

3. The additional amount of the Net present Value (NPV) of the diverted forest land, if any becoming due after finalization of the same by the Hon'ble Supreme Court of India on receipt of report from the Expert Committee, Shall be charged by the State Government from the user agency
4. The User Agency shall prepare scheme of plantation of dwarf species (preferably Medicinal plants) on the Right of way, wherever possible after completion of the stringing work, if the project site involves part of an animal corridor, plantation of dwarf species like Zizyphus etc may be taken up.
5. The plantatin scheme as mentioned above shall be exeuted by the State Forest Department at the project cost.
6. The Tree felling be restricted to only 3 meters on either side of the transmission line and rest of the trees will be allowed to remain intact except some peripheral pruning.
7. Nodal Officer will monior the marking and felling of trees during construction and the tree felling shall be restricted to the minimum.
8. The User Agency shall restore an alternative corridor by dismantling the older Kemar-Kudremukh power line and allied structure as compensatory measure for the loss of the corridor biodiversity values between Neriya-Banjar-Balur.
9. The alternative arrangement of power for relocated people due to dismantling of the old Kemar-Kudremukh line has to be expedited.
10. The new transmission line will be charged only after the old Kemar-Kudremukh is dismantled.
11. An inspection report on the compliance of the conditions at 9 and 10 above will be submitted by the Regional Office, Bangalore.
12. KPTCL has to pay the dues of Rs. 44.71 lakhs towards the NPV of forest land diverted earlier vide orders dated 04-07-2003 and 03-11-2003 as reported by the State Government within three months of the approval.
13. i) Below each conductor, width clearance of 3(Three) meters shall be permitted for taking tension stringing equipments. However, natural regeneration coppice shall be allowed to come up to the height of clearance.

    ii) Felling-pollarding –pruning of trees shall be done with the permission of the State Forest Departmen, whenever necessary to maintain height of clearance under the stringing.

    iii) One outer strip shall be left clear to permit maintenance of the transmission line.

    iv) Gap planting to be done to increase the density all along the transmission line.
14. In the remaining width of the Right of way minimum clearance of 2.8 meters beteen conductors and trees shall be allowed.
15. In case, the transmission line is to be constructed in hilly areas, where adequate clearance is already available, trees shall not be felled.
16. The User Agency shall ensure minimum felling of trees and maximum height of the towers in the forest area to ensure movement of elephants and other wild animals without any hurdles.
17. The User Agency will provide free electricity to the forest department in the area.
18. No labour camps shall be established on the forest land.
19. Sufficient alternate fuel shall be provided by the User Agency to the labourers to avoid pressure on the adjacent forst areas
20. The conditions put forth by the Gram Sabha when furnishing no objection to the project will be complied with.
21. The User Agency shall ensure that no damage is caused to existing wildlife in the area because of this project
22. Necessary safeguards are to be provided to prevent electrocution of elephants and the height of the towers through the wildlife corridor will be increased fairly high to avoid any electrocution due to possible sag.
23. The forest land shall not be used for any purpose other than that specified in the proposal.
24. A monitoring committee under the Chairmanship of the Principal Chief Conservator of Forests shall be constituted with Regional C.C.F. Bangalore as one of the members for monitoring the conditions and report on the compliance at six monthly interval.
25. The State Government shall ensure compliance of all the conditions stipulated by the Government of India and also the legal matter, if any.
26. The approval under the Forest (Conservation) Act, 1980 is subject to any other clearance required as per provisions of various Acts/Rules and notifications.
27. The user agency shall submit an annual self monitoring report of the compliances to the nodal officer of the State and Regional Office, Bangalore.
28. The lease period is for a period of 30 years.
29. The User Agency has to pay the lease rent as fixed by the Government at the time of sanction and any subsequent Orders in this regard.
30. In case the land is not used for the stipulated purpose or when it is no longer needed for the stipulated purpose, the area should automatically revert to the Karnataka Forest Department.

31. The Karnataka Forest Act 1963 and Rules 1969 will be applicable for any violation.
32. Only minimum number of trees shall be cut based on actual requirement of the project.
33. The User Agency shall pay the extraction and transportation charges of trees as estimated by the Deputy Conservators of Forest from the proposed land.
34. The User Agency shall pay the cost of raising compensatory afforestation over an extent of 172.53 ha. of non-forest land at the rate prevailing at the time of sanction (at present it is Rs. 1,05,000-00 per ha.).
35. The User Agency shall pay the Net Present Value (NPV) as per the Hon'ble Supreme Court of India Orders dated 28-3-2008 and 9-5-2008.
36. The User Agency shall pay the loss caused to the Karnataka Cashew Development Corporation Limited towards equity land cost and damage caused to the Cashew Plantations, as estimated by the managing Director,KCDC, Mangalore.
37. Any other condition imposed by the Government of India/Government of Karnataka will have to be abided by the lessee.
38. Any other condition that the CCF (Central), Regional Office, Bangalore/the State Forest Department may impose from time to time for protection, conservation/ development of flora and fauna shall also be applicable.

By Order and in the name of the Governor of Karnataka,

**G.H. Anasuyamma**

Under Secretary to Government,

Forest, Ecology and Environment Department

P.R. 576

## HORTICULTURE SECRETARIAT

**Sub :** "Central Sector Scheme for Drip Irrigation" –Release of funds – reg.

**Read :** Director of Horticulture letter No. ತೋಇ/ತೋಜಂನಿ/ಹನೀ/ಸತೋಅ-1/14/2011-12/1227 dated 18.01.2012.

**Preamble :**

The Director of Horticulture in his letter read above has informed that under the scheme for "Central Sector Scheme for Drip Irrigation" Head of Account 2401-00-108-2-30 (State sector), there is a need for releasing State share for matching the already released Central share.

2. This has been examined and hence this order;

**Govrnment Order No. HCD 121 HPP 2011 Bangalore, Dated: 09.02.2012.**

Government is pleased to release to the Director of Horticulture an amount of Rs. 359.00 lakhs (Rupees Three Hundred and Fifty Nine Lakhs Only) during 2011-12 towards the State share for "Central Sector Scheme for Drip Irrigation" under the Head of Account 2401-00-108-2-30 as detailed below;

(Rs. In lakhs)

| State Sector (2401-00-108-2-30) | | |
|---|---|---|
| Object Code | Sub Head | Amount Released |
| 059 | Other expenses | |
| 422 | Special Component Plan | 198.10 |
| 423 | Tribal Sub Plan | 160.90 |
| | **TOTAL** | **359.00** |

2. This Order issues with the concurrence of Internal Financial Advisor, Agriculture, Horticulture and Animal Husbandry Department vide its Note No. ತೋಇ 15 ಅಂಆಸ 2011 dated 03.02.2012.

By Order and in the name of the Governor of Karnataka,

**B.C. Prakash**

Under Secretary to Government,

Horticulture Department

P.R. 577

## ಸಹಕಾರ ಸಚಿವಾಲಯ

**ವಿಷಯ :** ಅಖಿಲ ಕರ್ನಾಟಕ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಘಕ್ಕೆ ನೇಮಿಸಿರುವ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸಇ 36 ಸಸಂನೋ 2010 ದಿನಾಂಕ: 25/5/2010.
2. ಸರ್ಕಾರದ ಆದೇಶ ಸಂಖ್ಯೆ: ಸಇ 36 ಸಸಂನೋ 2010 ದಿನಾಂಕ: 15/2/2011.
3. ಸರ್ಕಾರದ ತಿದ್ದುಪಡಿ ಆದೇಶ ಸಂಖ್ಯೆ: ಸಇ 120 ನ್ಯಾದಾಅ 2010 ದಿನಾಂಕ 24/2/2011.
4. ಸರ್ಕಾರದ ಆದೇಶ ಸಂಖ್ಯೆ: ಸಇ 120 ನ್ಯಾದಾಅ 2010 ದಿನಾಂಕ 16/6/2011.
5. ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ರವರ ಪತ್ರ ಸಂಖ್ಯೆ ಆರ್‌ಸಿಎಸ್/ಎಡಿಎಂ/53/ಎಸ್‌ಓಆರ್–3/2011–12 ದಿನಾಂಕ 19/12/2011.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಅಖಿಲ ಕರ್ನಾಟಕ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಸ್ಥೆಗೆ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು 1ನೇ ವೃತ್ತ ಇವರನ್ನು ಆಡಳಿತಾಧಿಕಾರಿಯಾಗಿ ಆರು (6) ತಿಂಗಳ ಅವಧಿಗೆ ನೇಮಿಸಿದೆ. ಅಲ್ಲದೆ

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಹಾಗೂ ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಹಾಗೂ ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ರವರಿಗೂ ಮಾಹಿತಿಯನ್ನು ಒದಗಿಸುವಂತೆ ಸೂಚಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ಬೆಂಗಳೂರು –– 1ನೇ ವೃತ್ತ ಇವರನ್ನು ಆಡಳಿತಾಧಿಕಾರಿಗಳನ್ನಾಗಿ ಮೂರು (3) ತಿಂಗಳ ಅವಧಿಗೆ ವಿಸ್ತರಿಸಲಾಗಿದೆ.

ಮೇಲೆ (3)ರಲ್ಲಿ ಓದಲಾದ ಸರ್ಕಾರದ ತಿದ್ದುಪಡಿಯಲ್ಲಿ ಸಹಕಾರ ಸಂಘಗಳ ಸಹಾಯಕ ನಿಬಂಧಕರು ಬೆಂಗಳೂರು–1ನೇ ವೃತ್ತ ಇವರ ಬದಲಾಗಿ ಶ್ರೀ ಎಂ.ಪಿ. ಮಂಜುನಾಥ್, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು–52 ಇವರನ್ನು ಸದರಿ ಸಂಸ್ಥೆಯ ಆಡಳಿತಾಧಿಕಾರಿಯಾಗಿ ನೇಮಿಸಿ ಮೂರು(3) ತಿಂಗಳ ಅವಧಿಗೆ ಮುಂದುವರಿಸಿ ಆದೇಶಿಸಲಾಗಿದೆ.

ಮೇಲೆ(4)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸದರಿ ಸಂಸ್ಥೆಯ ಆಡಳಿತಾಧಿಕಾರಿಯವರ ಅವಧಿಯನ್ನು ಕೊನೆಯದಾಗಿ ದಿನಾಂಕ 24/5/2011 ರಿಂದ ಮತ್ತೆ ಆರು (6) ತಿಂಗಳ ಅವಧಿಗೆ ಮುಂದುವರಿಸಿದೆ.

ಮೇಲೆ(5)ರಲ್ಲಿ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರದಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು ಹಾಗೂ ಸಂಘಗಳ ಜಿಲ್ಲಾ ನೋಂದಣಾಧಿಕಾರಿ, ಉತ್ತರ ವಲಯ ಬೆಂಗಳೂರು ನಗರ ಜಿಲ್ಲೆ ರವರು ಅಖಿಲ ಕರ್ನಾಟಕ ಗಾಣಿಗರ ಸಂಘ (ರಿ) ಬೆಂಗಳೂರು, ಈ ಸಂಘದ ಆಡಳಿತ ಮಂಡಳಿಗೆ ಸಂಘದಲ್ಲಿ ಲಭ್ಯವಿರುವ ದಾಖಲಾತಿಗಳ ಆಧಾರದ ಮೇಲೆ ಚುನಾವಣೆಯನ್ನು ನಡೆಸಿ, ನೂತನವಾಗಿ ಆಯ್ಕೆಯಾಗುವ ಆಡಳಿತ ಮಂಡಳಿಗೆ ಸಂಘದ ಪ್ರಭಾರವನ್ನು ವಹಿಸಿಕೊಡುವಂತೆ ಸಂಘದ ಆಡಳಿತಾಧಿಕಾರಿಯವರಿಗೆ ಸೂಚಿಸಿರುವ ಮೇರೆಗೆ ಆಡಳಿತಾಧಿಕಾರಿಯವರು ಸದರಿ ಸಂಘದ ಸದಸ್ಯರುಗಳ ಸದಸ್ಯತ್ವ ಅರ್ಜಿಗಳು, ಆಡಳಿತ ಮಂಡಳಿ ನಡವಳಿ ಪುಸ್ತಕ, ರಸೀದಿ ಪುಸ್ತಕಗಳು ಹಾಗೂ ನಗದು ಪುಸ್ತಕಗಳು ಲಭ್ಯವಿಲ್ಲದೆ ಇರುವುದರಿಂದ ಹಾಗೂ ಸಂಘದಲ್ಲಿ ಖರ್ಚು ವೆಚ್ಚಗಳಿಗೆ ಹಣದ ಕೊರತೆ ಇರುವುದರಿಂದ ಸದ್ಯಕ್ಕೆ ಆಡಳಿತ ಮಂಡಳಿಗೆ ಚುನಾವಣೆ ನಡೆಸಲು ಸಾಧ್ಯವಿಲ್ಲವೆಂದು ಹಾಗೂ ಈ ಎಲ್ಲಾ ಕ್ರಮಗಳನ್ನು ಕೈಗೊಳ್ಳಲು ಕಾಲಾವಕಾಶದ ಅಗತ್ಯತೆ ಇರುವುದರಿಂದ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ 23/11/201 ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಲು ಪ್ರಸ್ತಾವನೆ ಸಲ್ಲಿಸಿರುವುದಾಗಿ ತಿಳಿಸುತ್ತಾ, ಈ ಪ್ರಸ್ತಾವನೆಯನ್ನು ಪರಿಗಣಿಸಿ, ಅಖಿಲ ಕರ್ನಾಟಕ ಗಾಣಿಗರ ಸಂಘ (ರಿ), ಬೆಂಗಳೂರು ಈ ಸಂಸ್ಥೆಯ ಆಡಳಿತಾಧಿಕಾರಿಯವರ ಅವಧಿಯನ್ನು ದಿನಾಂಕ 23/11/2011 ರಿಂದ ಒಂದು ವರ್ಷದ ಅವಧಿಗೆ ವಿಸ್ತರಿಸಬೇಕಾಗಿ ಕೋರಿದ್ದಾರೆ.

ಸಹಕಾರ ಸಂಘಗಳ ನಿಬಂಧಕರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ : ಸಇ 120 ನ್ಯಾದಾಅ 2010 ಬೆಂಗಳೂರು, ದಿನಾಂಕ: 3ನೇ ಫೆಬ್ರವರಿ, 2012.**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಅಖಿಲ ಕರ್ನಾಟಕ ಗಾಣಿಗರ ಸಂಘ 9ರಿ), ಬೆಂಗಳೂರು, ಈ ಸಂಸ್ಥೆಯ ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಶ್ರೀ ಎಂ.ಪಿ. ಮಂಜುನಾಥ್, ಸಹಕಾರ ಅಭಿವೃದ್ಧಿ ಅಧಿಕಾರಿ, ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು–52 ಇವರ ಆಡಳಿತಾಧಿಕಾರಿ ಅವಧಿಯನ್ನು ಕೊನೆಯದಾಗಿ ದಿನಾಂಕ 23/11/2011 ರಿಂದ ಆರು (6) ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಆಡಳಿತ ಮಂಡಳಿಯ ಅವ್ಯವಹಾರಗಳನ್ನು ಸರಿಪಡಿಸಿ, ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ನೂತನ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ. ಆಡಳಿತಾಧಿಕಾರಿಗಳು ತೆಗೆದುಕೊಂಡ ಕ್ರಮಗಳ ಬಗ್ಗೆ ಸರ್ಕಾರಕ್ಕೆ ಹಾಗೂ ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ ರವರಿಗೂ ಮಾಹಿತಿಯನ್ನು ಒದಗಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ.ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಹಕಾರ ಇಲಾಖೆ.

ಪಿ.ಆರ್. 578

## ಸಹಕಾರ ಸಚಿವಾಲಯ

**ವಿಷಯ :** ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ ಬೆಂಗಳೂರು–ಬ್ಯಾಟರಾಯನಪುರ ಉಪ ಮಾರುಕಟ್ಟೆಯಲ್ಲಿ ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ (ಪಿ.ಪಿ.ಪಿ) ಆಧುನಿಕ ಮಾರುಕಟ್ಟೆ ನಿರ್ಮಾಣ ಯೋಜನೆಗೆ ಆಡಳಿತಾತ್ಮಕ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :**
1 ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕೃಮಾಇ/ಮಾಆಯೋ/ಅಅ–210/2010–11 ದಿ:21/10/2010.
2. ಸರ್ಕಾರದ ಪತ್ರ ಸಂಖ್ಯೆ: ಸಇ 322 ಎಂಆರ್‌ಇ 2010 ದಿನಾಂಕ: 4.11.2010
3. ನಿರ್ದೇಶಕರು, ಕೃಷಿ ಮಾರಾಟ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ:
4. ಸರ್ಕಾರ ಪ್ರಧಾನ ಕಾರ್ಯದರ್ಶಿ ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 04.01.2011 ರಂದು ನಡೆದ ಸಭೆಯ ನಡವಳಿಗಳು.
5. ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಇವರ ಪತ್ರ ಸಂಖ್ಯೆ ಕೃಮಾಇ/ಮಾಅಯೋ/ತಾಂತ್ರಿಕ/11595/2010–11 ದಿ: 24.1.2011
6. ಸರ್ಕಾರದ ಆದೇಶ ಸಂಖ್ಯೆ: ಸಿ 322 ಎಂಆರ್‌ಇ 2010 ದಿನಾಂಕ: 25.1.2011.
7. ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಇವರ ಪತ್ರ ಸಂಖ್ಯೆ: DAM/PAS/42/2011–12 ದಿನಾಂಕ: 18.7.2011.

**ಪ್ರಸ್ತಾವನೆ :**

ಕರ್ನಾಟಕ ಕೃಷಿ ಉತ್ಪನ್ನ ಮಾರಾಟ (ನಿಯಂತ್ರಣ ಮತ್ತು ಅಭಿವೃದ್ಧಿ) ಕಾಯ್ದೆ 1966 ಹಾಗೂ ನಿಮಗಳು 1968ರನ್ವಯ ಬೆಂಗಳೂರಿನಲ್ಲಿ 1994ರಲ್ಲಿ ಸ್ಥಾಪಿಸಲಾದಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ ಈ ಮಾರುಕಟ್ಟೆಗೆ ರೈತ ಹಿತ ಕಾಪಾಡಲು

ಹಾಗೂ ಹಣ್ಣು ಮತ್ತು ತರಕಾರಿ ವ್ಯಾಪಾರಕ್ಕೆ ಪೂರಕವಾದ ವ್ಯವಸ್ಥಿತ ಸೌಲಭ್ಯವನ್ನು ಕಲ್ಪಿಸಲು ಕಲಾಸಿಪಾಳ್ಯದಲ್ಲಿ ನಡೆಯುತ್ತಿರುವ ತರಕಾರಿ ವ್ಯಾಪಾರವನ್ನು ಬೆಂಗಳೂರು ನಗರ ಕೇಂದ್ರ ಪ್ರದೇಶದ ದಟ್ಟಣೆಯಿಂದ ನಗರದ ಹೊರ ವಲಯಕ್ಕೆ ಸ್ಥಳಾಂತರಿಸಲು 1987 ರಲ್ಲಿ ತರಕಾರಿಗಾಗಿ ಸಗಟು ಮಾರುಕಟ್ಟೆಯನ್ನಾಗಿ ಸ್ಥಾಪಿಸಿ ಉಪ ಮಾರುಕಟ್ಟೆ ಪ್ರಾಂಗಣವಾಗಿ ಅಭಿವೃದ್ಧಿಪಡಿಸಲು 31 ಎಕರೆ ಜಮೀನನ್ನು ಭೂ ಸ್ವಾಧೀನದ ಮೂಲಕ ಪಡೆಯಲಾಗಿದೆ.

ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ ಬೆಂಗಳೂರು ಇದಕ್ಕೆ ಸೇರಿದ ಬ್ಯಾಟರಾಯನಪುರ ಉಪ ಮಾರುಕಟ್ಟೆಯಲ್ಲಿ ಟರ್ನ್ ಕೀ ಆಧಾರದ ಮೇಲೆ ರೂ. 2–00 ಕೋಟಿ ವೆಚ್ಚದಲ್ಲಿ ಆಧುನಿಕ ಸಗಟು ಮಾರುಕಟ್ಟೆ ನಿರ್ಮಿಸಲು ಮೆ|| ಎನ್.ಡಿ.ಡಿ.ಬಿ ಯೊಂದಿಗೆ ಕರಾರನ್ನು ಮಾಡಿಕೊಳ್ಳಲಾಗಿತ್ತು. ನಂತರ ಸದರಿ ಸಂಸ್ಥೆ ರೂ. 41–00 ಕೋಟಿ ವೆಚ್ಚವಾಗುವುದಾಗಿ ತಿಳಿಸಿದ ಹಿನ್ನೆಲೆಯಲ್ಲಿ ದಿನಾಂಕ: 16.03.2006 ರಂದು ಸರ್ಕಾರದ ಕಾರ್ಯದರ್ಶಿ ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಿದಂತೆ ಸಂಸ್ಥೆಯೊಂದಿಗೆ ಮಾಡಿಕೊಂಡ ಕರಾರನ್ನು ರದ್ದುಪಡಿಸಲಾಯಿತು.

ತದನಂತರದ ದಿನಗಳಲ್ಲಿ ಬೆಂಗಳೂರು ಹಣ್ಣು ತರಕಾರಿಗಳ (ವಿಶೇಷ) ಮಾರುಕಟ್ಟೆ ಪ್ರಾಂಗಣದಲ್ಲಿ 400 ಸಗಟು ವ್ಯಾಪಾರಸ್ಥರು ಲೈಸೆನ್ಸ್ ಪಡೆದು ವ್ಯಾಪಾರ ವಹಿವಾಟು ನಡೆಸುತ್ತಿದ್ದು ಆ ಪ್ರದೇಶದ ಜಾಗವು ಕಿರಿದಾಗಿದ್ದು ಇವರಿಗೆಲ್ಲ ಬ್ಯಾಟರಾಯನಪುರದಲ್ಲಿರುವ ಜಾಗದಲ್ಲಿ ಹೊಸ ಮಾರುಕಟ್ಟೆಯನ್ನು ಸ್ಥಾಪಿಸಿ ಮಳಿಗೆಗಳನ್ನು ಹಂಚಿಕೆ ಮಾಡುವ ಬಗ್ಗೆ ಪರಿಶೀಲಿಸಲಾಯಿತು. ಇದಕ್ಕಾಗಿ ತಗಲುವ ವೆಚ್ಚವು ಅತ್ಯಧಿಕವಾಗಿದ್ದು ಸಮಿತಿಯಲ್ಲಿ ಅಷ್ಟೊಂದು ಹಣವು ಇಲ್ಲದೇ ಇರುವುದರಿಂದ ಸಾರ್ವಜನಿಕ ಸಹಭಾಗಿತ್ವದಲ್ಲಿ ಆಧುನಿಕ ಸಗಟು ಮರುಕಟ್ಟೆಯನ್ನು ವಿನ್ಯಾಸಗೊಳಿಸಲಾಯಿತು. ಈ ಹಿನ್ನೆಲೆಯಲ್ಲಿ ಪ್ರಥಮವಾಗಿ 2007 ರಲ್ಲಿ ಸಾರ್ವಜನಿಕ ಟೆಂಡರ್‌ನ್ನು ಕರೆಯಲಾಗಿತ್ತು. ಅಂದರ ಈ ಟೆಂಡರ್‌ಗೆ ಇದರಲ್ಲಿ ಮೆ|| ಯೂನಿಟೆಕ್ ಲಿ. ನವದೆಹಲಿ ಇವರೊಬ್ಬರು ಮಾತ್ರ ತಾಂತ್ರಿಕ ಅರ್ಹತೆಯನ್ನು ಹೊಂದಿದ್ದು ಒಂದೇ ಸಂಸ್ಥೆ ಭಾಗವಹಿಸಿದ್ದರಿಂದ ಹಾಗೂ ತಾಂತ್ರಿಕ ಕಾರಣಗಳಿಂದಾಗಿ ಟೆಂಡರ್ ಪ್ರಕ್ರಿಯೆಯನ್ನು ದಿನಾಂಕ: 22.10.2007ರಂದು ನಿರರ್ಥಕಗೊಳಿಸಿ ರದ್ದುಪಡಿಸಲಾಯಿತು. ಎರಡನೇ ಬಾರಿ ಕರೆಯಲಾದ ಟೆಂಡರ್‌ನಲ್ಲಿ ಮೆ|| ಎಸ್.ಪಿ.ಎಂ.ಎಲ್. ಜೊತೆಗೆ ಎಲ್.ಎಂ.ಜೆ. ಇಂಟರ್ ನ್ಯಾಷನಲ್ ಲಿ. ಮತ್ತು ಝುಡ್ ಸಿಸಿಎಲ್ ಜೊತೆಗೆ ಜಿ.ವಿ.ಪಿ.ಆರ್.ಇ.ಎಲ್. ಎಂಬ ಎರಡು ಸಂಸ್ಥೆಗಳು ಟೆಂಡರ್‌ನಲ್ಲಿ ಭಾಗವಹಿಸಿದ್ದು ತಾಂತ್ರಿಕ ಅರ್ಹತೆಯಲ್ಲಿ ಒಂದೇ ಸಂಸ್ಥೆ ಭಾಗವಹಿಸಿದ ಕಾರಣ ಸದರಿ ಟೆಂಡರ್‌ನ್ನು ಸಹ ದಿನಾಂಕ: 15.02.2010 ರಂದು ರದ್ದುಪಡಿಸಲಾಯಿತು.

ಬ್ಯಾಟರಾಯನಪುರದಲ್ಲಿ ಕಟ್ಟಿಸಲು ಉದ್ದೇಶಿಸಲಾಗಿದ್ದ ಮಾರುಕಟ್ಟೆ ಸಂಕೀರ್ಣದ ಅಭಿವೃದ್ಧಿಗೆ ಸಾಕಷ್ಟು ಸಂಸ್ಥೆಗಳು ಭಾಗವಹಿಸದಿರುವುದರ ಹಿನ್ನೆಲೆಯಲ್ಲಿ ದಿ: 24.04.2010 ರಂದು ಅಂದಿನ ಮಾನ್ಯ ಕೃಷಿ ಮಾರುಕಟ್ಟೆ ಮತ್ತು ಸಕ್ಕರೆ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೀರ್ಮಾನಿಸಿದಂತೆ 20 ಎಕರೆ ನಿವೇಶನವನ್ನು ಮಾರುಕಟ್ಟೆ ಸಂಕೀರ್ಣ ನಿರ್ಮಾಣಕ್ಕಾಗಿ ಮತ್ತು 10 ಎಕರೆ ಜಮೀನನ್ನು ವಾಣಿಜ್ಯ ಉಪಯೋಗಕ್ಕಾಗಿ ಬಳಸುವುದಕ್ಕಾಗಿ ಕಾಯ್ದಿರಿಸಲು ತೀರ್ಮಾನಿಸಿದೆ. ಕೆಲವು ಸರ್ಕಾರಿ ಸಂಸ್ಥೆಗಳು ಇದೇ ರೀತಿಯ ಯೋಜನೆಯಲ್ಲಿ ಹೆಚ್ಚಿನ ರಿಯಾಯಿತಿ ಅವಧಿಯನ್ನು ನಿಗಧಿಪಡಿಸಿರುವುದನ್ನು ಪರಿಗಣಿಸಿ ಈ ಯೋಜನೆಯಲ್ಲಿಯೂ ಅವಧಿಯನ್ನು 30 ವರ್ಷಗಳಿಂದ 60 ವರ್ಷಗಳಿಗೆ ವಿಸ್ತರಿಸಲು ತೀರ್ಮಾನಿಸಿದೆ.

ಅದರಂತೆ ಮಾರುಕಟ್ಟೆ ನಿರ್ಮಿಸಲು ಇರುವ ಜಾಗದಲ್ಲಿ 20 ಎಕರೆ ಜಮೀನನ್ನು ಮಾರುಕಟ್ಟೆ ಸಂಕೀರ್ಣ ನಿರ್ಮಾಣಕ್ಕಾಗಿ ಮತ್ತು 10 ಎಕರೆ ಜಮೀನನ್ನು ವಾಣಿಜ್ಯ ಉಪಯೋಗಕ್ಕಾಗಿ ಬಳಸಲು ತೀರ್ಮಾನಿಸಿ, ಯೋಜನೆಯಲ್ಲಿ ಹೆಚ್ಚಿನ ರಿಯಾಯಿತಿ ಅವಧಿಯನ್ನು 30 ವರ್ಷಗಳಿಂದ 60 ವರ್ಷಗಳಿಗೆ ವಿಸ್ತರಿಸಲು ತೀರ್ಮಾನಿಸಿ ಯೋಜನೆಯಲ್ಲಿ 3 ಬ್ಲಾಕ್‌ಗಳಲ್ಲಿ 436 ಅಂಗಡಿಗಳು, 20 ಮೀಟರ್ ಅಗಲದ ಕಾಂಕ್ರೀಟ್ ರಸ್ತೆ, ಶೀತಲಗೃಹ ನಿರ್ಮಾಣ, ವರ್ಗೀಕರಣ, ವಿಂಗಡಣೆ ಮತ್ತು ಪೂರಕ ಚಟುವಟಿಕೆಗಳಿಗಾಗಿ ಸೌಲಭ್ಯಗಳನ್ನು ನೀಡುವುದು. ಮಾರುಕಟ್ಟೆ ಸಮಿತಿಯ ಆಡಳಿತ ಕಛೇರಿ, ಬ್ಯಾಂಕ್, ವಿಶ್ರಾಂತಿ ಗೃಹ ಮುಂತಾದ ಸೌಲಭ್ಯಗಳಿಗಾಗಿ ಎರಡು ಮಹಡಿಗಳ ಕಟ್ಟಡವನ್ನು ಹಾಗೂ ಬಾಡಿಗೆ ಮೇಲೆ ನೀಡುವ ಸಲುವಾಗಿ ಹೆಚ್ಚುವರಿ ಕಛೇರಿ ಜಾಗವನ್ನು ನಿರ್ಮಿಸುವುದು ಹಾಗೂ ನೆಲಮಾಳಿಗೆಯಲ್ಲಿ ವಾಹನಗಳ ನಿಲುಗಡೆ ಸೌಲಭ್ಯವನ್ನು ಒದಗಿಸುವುದು. ಟೆಂಡರ್ ದಾಖಲೆಯಲ್ಲಿ ಪ್ರತಿಯೊಂದು ಸೌಲಭ್ಯಕ್ಕೆ ಗುರುತಿಸಲಾದ ನಿರ್ದಿಷ್ಟ ವಿಸ್ತೀರ್ಣ ಮತ್ತು ಕಟ್ಟಡ ನಿಮಾಣದ ನಿರ್ದಿಷ್ಟ ಗುಣಮಟ್ಟವನ್ನು ನಿಗದಿಪಡಿಸಲು ತೀರ್ಮಾನಿಸಿ 3ನೇ ಬಾರಿಗೆ ದಿನಾಂಕ: 20.08.2010 ರಂದು ಟೆಂಡರ್ ಕರೆಯಲಾಯಿತು.

ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ (ಪಿ.ಪಿ.ಪಿ) ಆಧುನಿಕ ಮಾರುಕಟ್ಟೆ ನಿರ್ಮಿಸುವ ಕುರಿತು ಟೆಂಡರ್ ಕರೆದು ಟೆಂಡರ್‌ನಲ್ಲಿ ಭಾಗವಹಿಸಿದ ಸಂಸ್ಥೆಗಳ ತಾಂತ್ರಿಕ ಬಿಡ್ ಅನ್ನು ಮೌಲ್ಯಮಾಪನ ಮಾಡಲು ಟೆಂಡರ್ ಪರಿಶೀಲನ ಉಪ ಸಮಿತಿಯನ್ನು ರಚಿಸುವಂತೆ ಮೇಲೆ (1) ರಲ್ಲಿ ಓದಲಾದ ಪತ್ರದಲ್ಲಿ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಇವರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿದ್ದರು.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಪತ್ರದಲ್ಲಿ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ರಾಜ್ಯ ಲೆಕ್ಕ ಪತ್ರ ಇಲಾಖೆ, ಪ್ರಧಾನ ವಾಸ್ತುಶಿಲ್ಪಿ ಕರ್ನಾಟಕ ಸರ್ಕಾರ, ಮೂಲಸೌಲಭ್ಯ ಇಲಾಖೆಯ ಪ್ರತಿನಿಧಿ ಮತ್ತಿತರರನ್ನು ಒಳಗೊಂಡ ಒಂದು ಟೆಂಡರ್ ಮೌಲ್ಯಮಾಪನ ಸಮಿತಿಯನ್ನು ದಿನಾಂಕ: 04.11.2010 ರಂದು ರಚಿಸಲಾಗಿತ್ತು.

ಟೆಂಡರ್ ಮೌಲ್ಯಮಾಪನ ಸಮಿತಿಯು ದಿನಾಂಕ: 13.12.2010 ರಂದು ತೀರ್ಮಾನಿಸಿದಂತೆ ಹಾಗೂ ಮೆ|| ಐಡೆಕ್ ಸಂಸ್ಥೆಯಿಂದ ತಾಂತ್ರಿಕ ಮಾಹಿತಿಯನ್ನು ಮೌಲ್ಯಮಾಪನ ಮಾಡಿಸಿ ಟೆಂಡರ್‌ನಲ್ಲಿ ಭಾಗವಹಿಸಿದ 4 ಸಂಸ್ಥೆಗಳಲ್ಲಿ ಮೆ|| ಟ್ರ್ಯೂ ಫ್ಯಾಬ್ ಇಂಜಿನಿಯರ್ಸ್ ಲಿ. ಸಂಸ್ಥೆಯನ್ನು ಹೊರತುಪಡಿಸಿ ಉಳಿದ 3 ಸಂಸ್ಥೆಗಳಾದ ಮೆ|| ಕೋಸ್ಟಲ್ ಪ್ರಾಜೆಕ್ಸ್ ಲಿ. ಮೆ|| ಶೋಭಾ ಡೆವಲಪರ್ಸ್ ಲಿ., ಮೆ|| ಆಕೃತಿ ಸಿಟಿ ಲಿ. ಇವರುಗಳು ಯೋಜನಾ ವರದಿಯಲ್ಲಿನ ಷರತ್ತುಗಳನ್ನು ಪೂರೈಸಿರುವುದರಿಂದ ಅರ್ಹರಾಗಿರುವುದಾಗಿ ಮೇಲೆ (3) ರಲ್ಲಿ ಓದಲಾದ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಬೆಂಗಳೂರು ಇವರ ಪತ್ರದಲ್ಲಿ ಸರ್ಕಾರಕ್ಕೆ ವರದಿ ಮಾಡಿರುತ್ತಾರೆ.

ಸರ್ಕಾರದ ಪ್ರಧಾನ ಕಾರ್ಯದರ್ಶಿ ಸಹಕಾರ ಇಲಾಖೆ ಇವರ ಅಧ್ಯಕ್ಷತೆಯಲ್ಲಿ ದಿನಾಂಕ: 04.01.2011 ರಂದು ನಡೆದ ಸಭೆಯಲ್ಲಿ ಐಡೆಕ್ ಸಂಸ್ಥೆಯು ನೀಡಿದ ವರದಿಯ ಮೇರೆಗೆ ತಾಂತ್ರಿಕ ಬಿಡ್ ನಲ್ಲಿ ಅರ್ಹತೆ ಗಳಿಸಿದ ಮೂರು ಸಂಸ್ಥೆಗಳ ಆರ್ಥಿಕ ಬಿಡ್ ನ್ನು ತೆರೆಯಲು ತೀರ್ಮಾನಿಸಿ ಸಾರ್ವಜನಿಕ ಮತ್ತು ಖಾಸಗಿ ಸಹಭಾಗಿತ್ವದಲ್ಲಿ ನಿರ್ಮಿಸಲು ಉದ್ದೇಶಿಸಿರುವ ಆಧುನಿಕ ಮಾರುಕಟ್ಟೆಯ ನಕ್ಷೆ, ಸ್ಥಳದ ವಿಸ್ತೀರ್ಣ ಇವುಗಳನ್ನು ಪರಿಶಿಲಿಸಿ ಕಟ್ಟಡದಲ್ಲಿ ಗಾರ್ಬೇಜ್ ವಿಲೇವಾರಿ, ಮಳೆ ನೀರು ಕೊಯ್ಲು (Rain water Harvesting), ಸೋಲಾರ್ ಉಪಕರಣಗಳನ್ನು ಅಳವಡಿಸುವುದು ಹಾಗೂ ಮಾರುಕಟ್ಟೆಯಲ್ಲಿ ವಾಹನಗಳ ಸುಲಲಿತ ಸಂಚಾರಕ್ಕೆ ವ್ಯವಸ್ಥೆ ಕಲ್ಪಿಸುವುದು. ಅಂಗಡಿ ಪ್ಲಾಟ್ ಫಾರಂಗಳನ್ನು ಉದ್ದಗಲಕ್ಕೂ ನಿರ್ಮಿಸುವುದು, ಕಾಂಕ್ರೀಟ್ ರಸ್ತೆಗಳನ್ನು ನಿರ್ಮಿಸುವುದು, ಕಟ್ಟಡದಲ್ಲಿ ಟೊಳ್ಳು ಇಟ್ಟಿಗೆಗಳನ್ನು (Hollow Bricks) ಬಳಸುವುದು, ಕಟ್ಟಡದ ಮೊದಲನೇ ಮಹಡಿಯಲ್ಲಿ ಕಛೇರಿಯ

ಕಟ್ಟಡಕ್ಕೆ ಅವಕಾಶ ಕಲ್ಪಿಸಿ ಉಳಿದ ಭಾಗವನ್ನು ವಾಣಿಜ್ಯ ಉದ್ದೇಶದಿಂದ ಬಾಡಿಗೆ ನೀಡುವುದು. ಮಾರುಕಟ್ಟೆಯಲ್ಲಿ ಮುಖ್ಯವಾಗಿ ರೈತರಿಗೆ ಅವಶ್ಯವಿರುವ ಎಲ್ಲಾ ತರಹದ ಸೌಕರ್ಯಗಳನ್ನು ಕಲ್ಪಿಸುವುದು ಮತ್ತು ಸಾಧ್ಯವಿದ್ದಲ್ಲಿ ಇಲಾಖೆಯ ಸಲುವಾಗಿ ಒಂದು ಗೆಸ್ಟ್ ಹೌಸ್ ನಿರ್ಮಿಸಲು ಯೋಜನೆಯನ್ನು ಸಿದ್ದಪಡಿಸಿ ರಾಜ್ಯ ಮಟ್ಟದ ಏಕ ಗವಾಕ್ಷಿ ಪರಿಶೀಲನಾ ಸಮಿತಿ ಮುಂದೆ ಮಂಡಿಸಿ ನಂತರ ಸಚಿವ ಸಂಪುಟದ ಮುಂದೆ ಮಂಡಿಸಲು ತೀರ್ಮಾನಿಸಲಾಯಿತು.

ಮೇಲೆ (5) ರಲ್ಲಿ ಓದಲಾದ ಪತ್ರದಲ್ಲಿ ದಿನಾಂಕ: 20.01.2011 ರಂದು ಯೋಜನೆಯ ಆರ್ಥಿಕ ಬಿಡ್ ತೆರೆದು ಸಮಿತಿಯು ನಡವಳಿಯನ್ನು ಸರ್ಕಾರಕ್ಕೆ ಸಲ್ಲಿಸಿದೆ ಹಾಗೂ ಮೇಲೆ (6) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ನಿರ್ದೇಶಕರು ಕೃಷಿ ಮಾರಾಟ ಇಲಾಖೆ, ಪಿಪಿಪಿ ಸೆಲ್ ಮೂಲಭೂತ ಸೌಲಭ್ಯ ಅಭಿವೃದ್ಧಿ ಇಲಾಖೆ, ಕಾರ್ಯಕಾರಿ ನಿರ್ದೇಶಕರು ಕರ್ನಾಟಕ ರಾಜ್ಯ ಇಂಡ್ರಿಯಲ್ ಇನ್ ವೆಸ್‌ಮೆಂಟ್ ಡೆವಲಪ್‌ಮೆಂಟ್ ಕಾರ್ಪೊರೇಷನ್, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಐಡೆಕ್ ಮತ್ತು ಸರ್ಕಾರದ ಉಪ ಕಾರ್ಯದರ್ಶಿ (ಬಿ&ಆರ್), ಆರ್ಥಿಕ ಇಲಾಖೆ ಇವರನ್ನು ಒಳಗೊಂಡ ಆರ್ಥಿಕ ಬಿಡ್ ಪರಿಶೀಲನಾ ಸಮಿತಿಯನ್ನು ರಚಿಸಲಾಗಿತ್ತು. ದಿನಾಂಕ: 03.03.2011 ರಂದು ನಡೆದ ಸದರಿ ಆರ್ಥಿಕ ಬಿಡ್ ಪರಿಶೀಲನಾ ಸಮಿತಿ ಸಭೆಯಲ್ಲಿ ತೀರ್ಮಾನಿಸಿದಂತೆ ಪ್ರತಿ 3 ತಿಂಗಳಿಗೆ ರೂ. 2.6 ಕೋಟಿ ನೀಡಲು ಒಪ್ಪಿರುವ ಮೆ|| ಶೋಭಾ ಡೆವಲಪರ್ಸ್ ಲಿ. ಮೂವರು ಬಿಡ್ದುದಾರರಲ್ಲಿ ಅತೀ ಹೆಚ್ಚು ಬಿಡ್ದು ಮಾಡಿರುವುದರಿಂದ, ಈ ಸಂಸ್ಥೆಗೆ ರಿಯಾಯಿತಿ ಅವಧಿಯನ್ನು 60 ವರ್ಷಗಳಿಗೆ ನೀಡಲು ತೀರ್ಮಾನಿಸಿತು. ಹಾಗೂ ಸದರಿ ಸಂಸ್ಥೆಯು ಬಿಡ್ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಗೆ ಲಾಭದಾಯಕವಾಗುವುದರಿಂದ ಇವರನ್ನು Preferred Binder ಆಗಿ ಪರಿಗಣಿಸಿ ಯೋಜನೆಯನ್ನು ಈ ಸಂಸ್ಥೆಗೆ ವಹಿಸಲು ತೀರ್ಮಾನಿಸಿದೆ.

ಉದ್ದೇಶಿತ ಪ್ರಸ್ತಾವನೆಗೆ ಸಂಬಂಧಿಸಿದಂತೆ ಆರ್ಥಿಕ ಇಲಾಖೆಯ ಮತ್ತು ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಇಲಾಖೆಯ ಅಭಿಪ್ರಾಯವನ್ನು ಪಡೆದ ನಂತರ ಬ್ಯಾಟರಾಯನಪುರದಲ್ಲಿ ಆಧುನಿಕ ಕೃಷಿ ಉತ್ಪನ್ನ ಮಾರುಕಟ್ಟೆ ಸಂಕೀರ್ಣವನ್ನು ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿಪಡಿಸಲು ಪ್ರಸ್ತಾವನೆಯನ್ನು ಸಚಿವ ಸಂಪುಟದ ಅನುಮೋದನೆಗೆ ಮಂಡಿಸಲಾಯಿತು ಹಾಗೂ ದಿನಾಂಕ: 31.12.2011 ರ ಸಚಿವ ಸಂಪುಟ ಸಭೆಯಲ್ಲಿ ಪ್ರಸ್ತಾವನೆಗೆ ಸಚಿವ ಸಂಪುಟವು ಅನುಮೋದನೆ ನೀಡಿರುತ್ತದೆ. ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಈ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಇ 322 ಎಂಆರ್‌ಇ 2010 ಬೆಂಗಳೂರು, ದಿನಾಂಕ: 20/01/2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಹಣ್ಣು ಮತ್ತು ತರಕಾರಿ(ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ, ಬೆಂಗಳೂರು ಇವರ ಒಡೆತನದ ಬ್ಯಾಟರಾಯನಪುರ ಉಪ ಮಾರುಕಟ್ಟೆಯಲ್ಲಿರುವ ಒಟ್ಟು 30 ಎಕರೆ ವಿಸ್ತೀರ್ಣದಲ್ಲಿ ಸಾರ್ವಜನಿಕ ಖಾಸಗಿ ಸಹಬಾಗಿತ್ವ (ಪಿ.ಪಿ.ಪಿ) ಯೋಜನೆಯಡಿ ಆಧುನಿಕ ಕೃಷಿ ಉತ್ಪನ್ನ ಮಾರುಕಟ್ಟೆಯನ್ನು ನಿರ್ಮಿಸುವ ಯೋಜನೆಗೆ ಈ ಕೆಳಕಂಡ ಅಂಶಗಳ ಬಗ್ಗೆ ಸರ್ಕಾರದ ಆಡಳಿತಾತ್ಮಕ ಅನುಮೋದನೆಯನ್ನು ನೀಡಲಾಗಿದೆ.

1. ಕೃಷಿ ಮಾರಾಟ ಇಲಾಖೆಯ ಬೆಂಗಳೂರಿನ ವಿಶೇಷ ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯು ಪ್ರಸ್ತಾಪಿಸಿರುವಂತೆ ತಾನು ಹೊಂದಿರುವ ಜಮೀನಿನ 20 ಎಕರೆ ಪ್ರದೇಶದಲ್ಲಿ ಕೃಷಿ ಉತ್ಪನ್ನ ಮಾರುಕಟ್ಟೆ ನಿರ್ಮಾಣ ಮತ್ತು ಸಂಬಂಧಿಸಿದ ಪ್ರಾಧಿಕಾರಗಳು ಕಟ್ಟಡದ ಎತ್ತರ ಮತ್ತು ಇತರ ವಿಷಯಗಳಿಗೆ ಸಂಬಂಧಿಸಿದಂತೆ ಅನುಮತಿಸುವ ಮಿತಿಗೊಳಪಟ್ಟು 10 ಎಕರೆ ಪ್ರದೇಶದಲ್ಲಿ ವಾಣಿಜ್ಯ ಸಂಕೀಣವನ್ನು ಒಳಗೊಂಡಿರುವಂತೆ ಬ್ಯಾಟರಾಯನಪುರದಲ್ಲಿ ಆಧುನಿಕ ಕೃಷಿ ಉತ್ಪನ್ನ ಮಾರುಕಟ್ಟೆ ಸಂಕೀರ್ಣವನ್ನು ಅಭಿವೃದ್ಧಿಪಡಿಸುವುದು.
2. ಈ ಸಂಬಂಧ ಕರ್ನಾಟಕ ಪಾರದರ್ಶಕ ಕಾಯ್ದೆ 1999ರನ್ವಯ ಇ-ಟೆಂಡರ್ ಪದ್ಧತಿಯ ಮೂಲಕ ಕರೆಯಾದ ಟೆಂಡರ್ ನಂತೆ ರೂ. 106.30 ಕೋಟಿ ವೆಚ್ಚದಲ್ಲಿ 20 ಎಕರೆ ಪ್ರದೇಶದಲ್ಲಿ ಮಾರುಕಟ್ಟೆ ಸಂಕೀರ್ಣವನ್ನು ನಿರ್ಮಿಸುವ ಮತು ಉಚಿತವಾಗಿ ಈ ಸಂಕೀರ್ಣವನ್ನು ಮಾರುಕಟ್ಟೆ ಸಮಿತಿಗೆ ಹಸ್ತಾಂತರಿಸುವುದರ ಜೊತೆಗೆ 60 ವರ್ಷಗಳವರೆಗೆ ತ್ರೈಮಾಸಿಕ ರೂ. 2.60 ಕೋಟಿ ರಿಯಾಯಿತಿ ಹಣವನ್ನು ವಾರ್ಷಿಕ ಶೇ. 3ರ ಹೆಚ್ಚಳದೊಂದಿಗೆ ಪಾವತಿ ಮಾಡುವ ಕುರಿತು ಅತಿ ಹೆಚ್ಚು ರಿಯಾಯಿತಿ ದರವನ್ನು ನಮೂದಿಸಿರುವ ಮೆ|| ಶೋಭಾ ಡೆವಲಪರ್ಸ್ ಲಿ., ಇವರನ್ನು ಆಯ್ಕೆಯಾದ ಬಿಡ್ ದಾರರೆಂದು ಘೋಷಿಸುವುದು.
3. ಯಶಸ್ವಿ ಬಿಡ್ ದಾರರು ಒಪ್ಪಂದದ ಅವಧಿ ಮುಗಿದ ಕೂಡಲೇ ವಾಣಿಜ್ಯ ಉದ್ದೇಶಕ್ಕಾಗಿ ಅಭಿವೃದ್ಧಿ ಪಡಿಸಿದ ಸ್ಥಳದಲ್ಲಿರುವ ಕಟ್ಟಡ ಹಾಗೂ ಅದರಲ್ಲಿರುವ ಎಲ್ಲಾ ಸೌಲಭ್ಯಗಳನ್ನು ಸುಸ್ಥಿತಿಯಲ್ಲಿ ಮಾರುಕಟ್ಟೆ ಸಮಿತಿಗೆ ಹಿಂತಿರುಗಿಸುವುದು.
4. ಮಾರುಕಟ್ಟೆ ಸಮಿತಿಯು ಒಪ್ಪಂದದ ಸಂಪೂರ್ಣ ಅವಧಿಯಲ್ಲಿ ಪೂರ್ಣ ನಿವೇಶನದ ಮಾಲೀಕತ್ವದ ಹಕ್ಕನ್ನು ಹೊಂದಿರುತದೆ ಮತ್ತು ಅಭಿವೃದ್ಧಿದಾರರು ಸದರಿ ನಿವೇಶನದ ಮೇಲೆ ಯಾವುದೇ ಹಕ್ಕು ಪ್ರತಿಪಾದಿತಕ್ಕದ್ದಲ್ಲ.
6. ಈ ಯೋಜನೆಯ ಅನುಷ್ಠಾನಕ್ಕಾಗಿ ರಾಜ್ಯ ಸರ್ಕಾರದಿಂದ ಯಾವುದೇ ಅನುದಾನ, ಸಹಾಯಧನ, ಬ್ಯಾಂಕ್ ಗ್ಯಾರಂಟಿ, ನೀಡುವುದಿಲ್ಲ.
7. ಕಾರ್ಯದರ್ಶಿ ಹಣ್ಣು ಮತ್ತು ತರಕಾರಿ (ವಿಶೇಷ) ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿ, ಬಿನ್ನಿಪೇಟೆ, ಬೆಂಗಳೂರು ಇವರು ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಬೆಂಗಳೂರು ಇವರ ಮಾರ್ಗದರ್ಶನದಲ್ಲಿ ಕರ್ನಾಟಕ ಕೃಷಿ ಉಪನ್ನ ಮಾರುಕಟ್ಟೆ (ನಿಯಂತ್ರಣ ಮತ್ತು ಅಭಿವೃದ್ಧಿ) ಕಾಯ್ದೆ 1966ರಲ್ಲಿನ ಅವಕಾಶದ ರೀತ್ಯ ಕ್ರಮ ಜರುಗಿಸಿ ಯೋಜನೆಯ ಯಶಸ್ವಿ ಬಿಡ್‌ದಾರರಾದ ಮೆ ಶೋಭಾ ಡೆವಲಪರ್ಸ್ ಲಿ. ಇವರೊಂದಿಗೆ ಕರಾರು ಒಪ್ಪಂದ ಮಾಡಿಕೊಂಡು (Project Development and Implimention Agreement (PDIA) ಗೆ ಸಹಿ ಪಡೆಯತಕ್ಕದ್ದು.
8. ಯೋಜನೆಯ ಅನುಷ್ಠಾನ ಪ್ರಗತಿಯ ಬಗ್ಗೆ ನಿರ್ದೇಶಕರು ಕೃಷಿ ಮಾರಾಟ ಇಲಾಖೆ ಬೆಂಗಳೂರು ಇವರು ಕಾಲಕಾಲಕ್ಕೆ ಪರಿಶೀಲಿಸಿ ಕಾಲಮಿತಿಯೊಳಗೆ ಯೊಜನೆ ಅನುಷ್ಠಾನಗೊಳಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿ.ಕೆ. ವಾಸುದೇವಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ.

ಪಿ.ಆರ್. 579

## ಸಹಕಾರ ಸಚಿವಾಲಯ

**ವಿಷಯ :** ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ನಿವೇಶನ ಹಂಚಿಕೆಯಲ್ಲಿನ ಅವ್ಯವಹಾರಗಳನ್ನು ಲೋಕಾಯುಕ್ತ ವಿಚಾರಣೆಗೆ ಒಳಪಡಿಸುವ ಕುರಿತು.

**ಓದಲಾಗಿದೆ :** 1) ಕಾರ್ಯದರ್ಶಿ, ಕರ್ನಾಟಕ ವಿಧಾನ ಪರಿಷತ್ತು ರವರ ಅ.ಸ.ಪತ್ರ ಸಂಖ್ಯೆ: ಕವಿಪ:131:ಅಸ:2010.

2) ಸಹಕಾರ ಸಂಘಗಳ ನಿಬಂಧಕರು ರವರ ಪತ್ರ ಸಂಖ್ಯೆ: ಹೆಚ್‌ಎಸ್‌ಜಿ–2:136:ಹೆಚ್‌ಹೆಚ್‌ಎಸ್: 2010–11. ದಿನಾಂಕ 19–04–2011 ಮತ್ತು ಹೆಚ್‌ಎಸ್‌ಜಿ–2:136:ಹೆಚ್‌ಹೆಚ್‌ಎಸ್:2011–12, ದಿನಾಂಕ 03–10–2012.

3) ಸರ್ಕಾರದ ಪತ್ರ ಸಂಖ್ಯೆ: ಸಿಒ 6 ಸಿಹೆಚ್‌ಎಸ್ 2007, ದಿನಾಂಕ 19–12–2011.

4) ನಿಬಂಧಕರು, ಕರ್ನಾಟಕ ಲೋಕಾಯುಕ್ತರವರ ಪತ್ರ ಸಂಖ್ಯೆ: ಎಲ್‌ಒಕೆ/ಎಮ್‌ಐಎಸ್‌ಸಿ/71/2012, ದಿನಾಂಕ 04–01–2012.

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಪತ್ರದಲ್ಲಿ ತಿಳಿಸಿರುವಂತೆ ಅರ್ಜಿ ಸಂಖ್ಯೆ: 375/2001(97/2009)ಗೆ ಸಂಬಂಧಿಸಿದಂತೆ ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ, ಬೆಂಗಳೂರು ಇಲ್ಲಿ ನಿವೇಶನ ಹಂಚಿಕೆ ವಿಷಯದಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ಅರ್ಜಿ ಸಮಿತಿ ನಡೆಸಿದ ವಿಚಾರಣೆಯಲ್ಲಿ ಸಮಿತಿಯ ಗಮನಕ್ಕೆ ಸಾಕಷ್ಟು ಅಕ್ರಮಗಳು ನಡೆದಿರುವುದು ಮೇಲ್ನೋಟಕ್ಕೆ ಕಂಡು ಬಂದಿರುವುದರಿಂದ ಈ ಬಗ್ಗೆ ಸಮಗ್ರ ತನಿಖೆಯನ್ನು ಲೋಕಾಯುಕ್ತ ಸಂಸ್ಥೆಗೆ ಒಪ್ಪಿಸಬೇಕೆಂದು ಸಮಿತಿಯು ನಿರ್ಣಯಿಸಿರುತ್ತದೆ. ಮೇಲೆ ಓದಲಾದ (2)ರ ಪತ್ರಗಳಲ್ಲಿ ಸಹಕಾರ ಸಂಘಗಳ ನಿಬಂಧಕರ ಪತ್ರಗಳಲ್ಲಿ ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ, ಬೆಂಗಳೂರು 1964ರಲ್ಲಿ ನೋಂದಣಿಯಾದಾಗಿನಿಂದ ಈ ವರೆಗೆ ಬಿ.ಡಿ.ಎ. ಯಿಂದ ಮಂಜೂರಾದ 20 ಎಕರೆ ಜಮೀನಿನಲ್ಲಿ 298 ನಿವೇಶನಗಳಿಗೆ ಮಂಜೂರಾತಿ ದೊರೆತಿದ್ದರೂ, 278 ನಿವೇಶನಗಳನ್ನು ರಚಿಸಿದ್ದು 20 ನಿವೇಶನಗಳ ಬಗ್ಗೆ ಸಂಘವು ಸ್ಪಷ್ಟವಾದ ಮಾಹಿತಿಯನ್ನು ನೀಡಿರುವುದಿಲ್ಲ. ಸಂಘದ ಹಿಂದಿನ ಆಡಳಿತ ಮಂಡಳಿಯು ಸಿ.ಎ. ನಿವೇಶನಗಳನ್ನು ಸೇರಿ ಒಟ್ಟು 339 ನಿವೇಶನಗಳನ್ನು ಜ್ಯೆಷ್ಠತೆಯನ್ನು ಕಡೆಗಣಿಸಿ ಹೆಚ್ಚಿನ ಬೆಲೆಗೆ ಕಿರಿಯ ಸದಸ್ಯರಿಗೆ ಹಂಚಿಕೆ ಮಾಡಿ ಅಕ್ರಮವೆಸಗಿರುತ್ತಾರೆ. ನಂತರ ಅಸ್ತಿತ್ವಕ್ಕೆ ಬಂದ ಆಡಳಿತ ಮಂಡಳಿ ಕಿರಿಯ ಸದಸ್ಯರಿಗೆ ಹಂಚಿಕೆ ಮಾಡಿದ್ದ 150 ನಿವೇಶನ ಹಂಚಿಕೆಗಳನ್ನು ರದ್ದು ಪಡಿಸಿದ ಹಿನ್ನಲೆಯಲ್ಲಿ ಬಾಧಿತರಾದವರು ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 70ರಡಿ ಒಟ್ಟು 198 ದಾವೆಗಳನ್ನು ದಾಖಲಿಸಿದ್ದು 189 ದಾವೆಗಳು ಇತ್ಯರ್ಥವಾಗಿರುತ್ತವೆ ಮತ್ತು 9 ದಾವೆಗಳು ಬಾಕಿಯಿವೆ. ಇತ್ಯರ್ಥವಾದ ಪ್ರಕರಣಗಳಲ್ಲಿ 26 ಪ್ರಕರಣಗಳು ಕೆ.ಎ.ಟಿ.ಯಲ್ಲಿ ಹಾಗೂ 6 ಪ್ರಕರಣಗಳು ಸಿವಿಲ್ ನ್ಯಾಯಾಲಯದಲ್ಲಿ ಮೇಲ್ಮನವಿಗೆ ದಾಖಲಾಗಿದ್ದು ವಿಚಾರಣೆ ನಡೆಯುತ್ತಿದೆ ಎಂದು ತಿಳಿಸುತ್ತಾ ಸದರಿ ಪ್ರಕರಣದ ಎಲ್ಲಾ ಹಂತಗಳನ್ನು ವಿವರಿಸಿ ಪ್ರಕರಣವನ್ನು ಲೋಕಾಯುಕ್ತ ಸಂಸ್ಥೆಗೆ ವಹಿಸುವುದು ಸೂಕ್ತವೆಂದು ಅಭಿಪ್ರಾಯ ಪಟ್ಟಿರುತ್ತಾರೆ.

ಆದುದ್ದರಿಂದ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಒ 6 ಸಿಎಚ್‌ಎಸ್ 2007, ಬೆಂಗಳೂರು, ದಿನಾಂಕ 30–01–2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬಾಪೂಜಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತ ಮಂಡಳಿಯು ನಿವೇಶನ ಹಂಚಿಕೆ ವಿಷಯದಲ್ಲಿ ಮಾಡಿರುವ ಅವ್ಯವಹಾರಗಳ ಬಗ್ಗೆ ಗೌರವಾನ್ವಿತ ಲೋಕಾಯುಕ್ತ ಇವರಿಂದ ತನಿಖೆ ನಡೆಸಲು ಕರ್ನಾಟಕ ಲೋಕಾಯುಕ್ತ ಅಧಿನಿಯಮ 1984 ಪ್ರಕರಣ 7(2ಎ) ಮೇರೆಗೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಆರ್. ಎಸ್. ನೂಲಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ

ಪಿ.ಆರ್. 580 ಸಹಕಾರ ಇಲಾಖೆ

## ಸಹಕಾರ ಸಚಿವಾಲಯ

**ವಿಷಯ :** ಶ್ರೀ ಸಂಗಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿಡಕಲ್ ಡ್ಯಾಂ ಹುಕ್ಕೇರಿ ತಾಲ್ಲೂಕು ಬೆಳಗಾವಿ ಜಿಲ್ಲೆ, ಇದರ 2009–10 ಮತ್ತು 2010–11ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ನಡೆಸಲು ಕಾಲಾವಕಾಶ ನೀಡುವ ಬಗ್ಗೆ.–

**ಓದಲಾಗಿದೆ :** ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು, ರವರ ಪತ್ರ ಸಂಖ್ಯೆ: DSK-ESTS-51–2011–12, ದಿನಾಂಕ 19–12–2011.

**ಪ್ರಸ್ತಾವನೆ :**

ಶ್ರೀ ಸಂಗಮ ಸಹಕಾರಿ ಸಕ್ಕರೆ ಕಾರ್ಖಾನೆ ಇ., ಹಿಡಕಲ್ ಡ್ಯಾಂ ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದರ 2009–10 ಮತ್ತು 2010–11ನೇ ಸಾಲುಗಳ ವಾರ್ಷಿಕ ಮಹಾ ಸಭೆಗಳನ್ನು 2011ನೇ ಸೆಪ್ಟೆಂಬರ್ ಮಾಹೆಯಲ್ಲಿ ನಡೆಸಬೇಕಾಗಿತ್ತು ಆದರೆ ಕಾರ್ಖಾನೆಯನ್ನು 30 ವರ್ಷಗಳ ಅವಧಿಗೆ ಖಾಸಗಿಯವರಿಗೆ ಗುತ್ತಿಗೆ ನೀಡಲಾಗಿದ್ದು, ಗುತ್ತಿಗೆ ಕರಾರಿನಂತೆ ಕಾರ್ಖಾನೆಯ ಎಲ್ಲಾ ಚರ ಹಾಗೂ ಸ್ಥಿರಾಸ್ತಿಗಳನ್ನು ಗುತ್ತಿಗೆದಾರ ಕಂಪನಿಗೆ ವಹಿಸಿಕೊಟ್ಟಿರುವುದರಿಂದ ವಾರ್ಷಿಕ ಮಹಾಸಭೆಯನ್ನು ಕಾರ್ಖಾನೆಯ ಗೋದಾಮಿನಲ್ಲಿ ಜರುಗಿಸಲು ಸಾಧ್ಯವಾಗಿರುವುದಿಲ್ಲ. ಅಲ್ಲದೆ ಪ್ರಿನ್ಸಿಪಲ್ ಡಿಸ್ಟ್ರಿಕ್ಟ್ ಮತ್ತು ಸೆಷನ್ ಜಡ್ಜ್ ಬೆಳಗಾವಿ ಇವರ ನ್ಯಾಯಾಲಯದ ಆದೇಶದಂತೆ ಕಾರ್ಖಾನೆಯ ಆವರಣದಲ್ಲಿ ಪ್ರವೇಶಕ್ಕೆ ಅವಕಾಶ ಇರುವುದಿಲ್ಲವಾದ್ದರಿಂದ ಕಾರ್ಖಾನೆಯ ಸುತ್ತಮುತ್ತ ಸಭೆಯನ್ನು ನಡೆಸುವಷ್ಟು ವಿಶಾಲವಾದ ಸ್ಥಳಾವಕಾಶ ದೊರೆಯದ್ದರಿಂದ, ಕಾರ್ಖಾನೆಯ ಆಡಳಿತ ಮಂಡಳಿಯ ದಿನಾಂಕ 30–08–2011ರ ಸಭೆಯ ತೀರ್ಮಾನದಂತೆ 2009–10 ಮತ್ತು 2010–2011ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು ಮುಂದೂಡಿ 2011–12ನೇ ವಾರ್ಷಿಕ ಮಹಾಸಭೆಯೊಂದಿಗೆ ಒಟ್ಟಿಗೆ ನಡೆಸಲು ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 121ರಡಿ ಸರ್ಕಾರಕ್ಕೆ ಪ್ರಸ್ತುತವಾದ ಅಧಿಕಾರವನ್ನು ಚಲಾಯಿಸಿ ಕಲಂ 27(1)ನ್ನು ಸಡಿಲಿಸಿ, ದಿನಾಂಕ 30–09–2012ರವರೆಗೆ ಕಾಲಾವಕಾಶದ ಅನುಮತಿ ನೀಡಬಹುದೆಂದು ಮೇಲೆ ಓದಲಾದ ಪತ್ರದಲ್ಲಿ ಆಯುಕ್ತರು ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 01 ಸಸಕಾ 2012, ಬೆಂಗಳೂರು, ದಿನಾಂಕ 06-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಪ್ರಕರಣ 27(1)ನ್ನು ಮಾರ್ಪಾಡಿಸಿ ಶ್ರೀ ಸಂಗಮ ಸಹಕಾರಿ ಸಕ್ಕರೆ ಕಾರ್ಖಾನೆ ನಿ., ಹಿಡಕಲ್ ಡ್ಯಾಂ, ಹುಕ್ಕೇರಿ ತಾಲ್ಲೂಕು, ಬೆಳಗಾವಿ ಜಿಲ್ಲೆ ಇದರ 2009-10 ಮತ್ತು 2010-2011ನೇ ಸಾಲುಗಳ ವಾರ್ಷಿಕ ಮಹಾಸಭೆಗಳನ್ನು 2011-12ನೇ ಸಾಲಿನ ವಾರ್ಷಿಕ ಮಹಾಸಭೆಯೊಂದಿಗೆ ಸೇರಿಸಿ ದಿನಾಂಕ 30-09-2012 ರೊಳಗೆ ನಡೆಸಲು ಅನುಮತಿ ನೀಡಿದೆ.

**ಸೂಚನೆ:** ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 27(1)ರ ಉಪಬಂಧಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ 30-09-2012 ರವರೆಗೆ ಜಾರಿಯಲ್ಲಿರತಕ್ಕದ್ದು, ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಪ್ರಕರಣ 27(1)ರ ಪ್ರಕರಣದ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ. ಜಿ. ಪಾಟೀಲ್**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಜಂಟಿ ಕಾರ್ಯದರ್ಶಿ (ಪ್ರಭಾರ)

ಸಹಕಾರ ಇಲಾಖೆ

ಪಿ.ಆರ್. 581

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ದಿ ಮೈಸೂರು ಷುಗರ್ ಕಂಪನಿ ಲಿಮಿಟೆಡ್, ಮಂಡ್ಯ ಈ ಕಾರ್ಖಾನೆಗೆ 2011-12ನೇ ಸಾಲಿನ ಮಿಲ್ ಆಧುನೀಕರಣ ಹಾಗೂ ದುಡಿಯುವ ಬಂಡವಾಳಕ್ಕಾಗಿ ಬಂಡವಾಳ ವೆಚ್ಚಗಳಿಂದ (CAPEX) ಹೆಚ್ಚುವರಿ ಹಣ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** 1) ವ್ಯವಸ್ಥಾಪಕ ನಿರ್ದೇಶಕರು ದಿ ಮೈಸೂರು ಷುಗರ್ ಕಂಪನಿ ಲಿಮಿಟೆಡ್, ಮಂಡ್ಯ, ಇವರ ಪತ್ರ ಸಂಖ್ಯೆ: ಎಂಎಸ್‌ಕೋ/ಎಂಡಿ/2011/38, ದಿನಾಂಕ 18-11-2011 ಮತ್ತು 07-12-2011.

2) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 195 ಬಿಆರ್‌ಎಸ್ 2011, ದಿನಾಂಕ 31-01-2012

3) ಸರ್ಕಾರಿ ಆದೇಶ ಸಂಖ್ಯೆ: ಸಿಐ 35 ಎಸ್‌ಜಿಎಫ್ 2011, ದಿನಾಂಕ 06-02-2012

4) ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 218 ಬಿಆರ್‌ಎಸ್ 2011, ದಿನಾಂಕ 06-02-2012

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ದಿ ಮೈಸೂರು ಷುಗರ್ ಕಂಪನಿ ಲಿಮಿಟೆಡ್ ಇವರ ಪತ್ರದಲ್ಲಿ ಮಿಲ್ ಆಧುನೀಕರಣದ ಸಲುವಾಗಿ ಬಂಡವಾಳ ವೆಚ್ಚಗಳಿಗಾಗಿ (CAPEX) ಹೆಚ್ಚುವರಿ ₹35.64 ಕೋಟಿಗಳನ್ನು ಹಾಗೂ ದುಡಿಯುವ ಬಂಡವಾಳವಾಗಿ ₹11.25 ಕೋಟಿಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ದಿ ಮೈಸೂರು ಷುಗರ್ ಕಂಪೆನಿಗೆ 2011-12ನೇ ಸಾಲನಲ್ಲಿ ಲೆಕ್ಕ ಶೀರ್ಷಿಕೆ 4860-04-190-1-00-211 Investment (plan) ರಡಿ ₹500.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಮಂಜೂರು ಮಾಡಲಾಗಿದ್ದು, (3)ರಲ್ಲಿ ಓದಲಾದ ಆದೇಶದಲ್ಲಿ ಸದರಿ ₹500.00 ಲಕ್ಷಗಳನ್ನು ಬಿಡುಗಡೆಗೊಳಿಸಲಾಗಿದೆ.

ಮೇಲೆ (4)ರಲ್ಲಿ ಓದಲಾದ ಆದೇಶದಲ್ಲಿ ದಿ ಮೈಸೂರು ಷುಗರ್ ಕಂಪೆನಿಗೆ 2011-12ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 4860-04-190-1-00-211 Investment (plan) ರಡಿ ₹500.00 ಲಕ್ಷಗಳ ಹೆಚ್ಚುವರಿ ಅನುದಾನವನ್ನು ಮಂಜೂರು ಮಾಡಲಾಗಿದೆ. ಅದರಂತೆ ಈ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 35 ಎಸ್‌ಜಿಎಫ್ 2011, ಬೆಂಗಳೂರು, ದಿನಾಂಕ 13-02-2012**

ದಿ ಮೈಸೂರು ಷುಗರ್ ಕಂಪೆನಿ ಲಿಮಿಟೆಡ್, ಮಂಡ್ಯ ಈ ಕಾರ್ಖಾನೆಗೆ 2011-12ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 4860-04-190-1-00-211 ಬಂಡವಾಳ ಹೂಡಿಕೆ (ಯೋಜನೆ) ಇದರಡಿಯಲ್ಲಿ ಒದಗಿಸಿರುವ ಹೆಚ್ಚುವರಿ ಅನುದಾನ ₹500.00 ಲಕ್ಷಗಳನ್ನು (ಐದು ನೂರು ಲಕ್ಷ ರೂಪಾಯಿಗಳು ಮಾತ್ರ) ದುಡಿಯುವ ಬಂಡವಾಳವಾಗಿ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ, ಮಂಡ್ಯ ಇವರು ಹಣ ಸೆಳೆಯುವ ಅಧಿಕಾರಿಯಾಗಿದ್ದು, ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಅಥವಾ ಇವರ ಅನುಪಸ್ಥಿತಿಯಲ್ಲಿ ಕೇಂದ್ರ ಸ್ಥಾನಿಕ ಸಹಾಯಕರು, ಸಕ್ಕರೆ ನಿರ್ದೇಶನಾಲಯ, ಇವರ ಮೇಲುಸಹಿಯೊಂದಿಗೆ ಖಜಾನೆಗೆ ಸಲ್ಲಿಸತಕ್ಕದ್ದು.

ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/71/ವೆಚ್ಚ-1/2012, ದಿನಾಂಕ 07-02-2012ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಶಿವಶಂಕರ ನಾಯಕ್, ಎಲ್**

ಪೀಠಾಧಿಕಾರಿ (ಸಕ್ಕರೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

ಪಿ.ಆರ್. 582

## ಸಹಕಾರ ಸಚಿವಾಲಯ

**ವಿಷಯ :** ದೇಶೀಯ ವಿದ್ಯಾಶಾಲಾ ಸಮಿತಿ, ಶಿವಮೊಗ್ಗ ಈ ಸಂಸ್ಥೆಗೆ ನೇಮಕ ಮಾಡಿರುವ ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸುವ ಬಗ್ಗೆ.–

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ: ಕಂಇ 17 ಮುನೋಸೋ 2006, ದಿನಾಂಕ 06–06–2007

2) ಸರ್ಕಾರಿ ಆದೇಶ ಸಂಖ್ಯೆ: ಸಇ 123 ಸಸಂನೋ 2009, ದಿನಾಂಕ 08–04–2011.

3) ಸಹಕಾರ ಸಂಘಗಳ ನಿಬಂಧಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಆರ್‌ಸಿಎಸ್/ಎಡಿಎಂ/295/ಎಸ್‌ಒಆರ್–1/2008–09, ದಿನಾಂಕ 04–10–2011.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ 06–06–2006ರ ಆದೇಶದಲ್ಲಿ, ದೇಶೀಯ ವಿದ್ಯಾ ಶಾಲಾ ಸಮಿತಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಈ ಸಂಘಕ್ಕೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27–ಎ (1) ಪ್ರಕಾರ ಸರ್ಕಾರಕ್ಕೆ ನಿಹಿತವಾಗಿರುವ ಅಧಿಕಾರವನ್ನು ಚಲಾಯಿಸಿ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪ ವಿಭಾಗ, ಶಿವಮೊಗ್ಗ ಜಿಲ್ಲೆ, ಇವರನ್ನು ಆಡಳಿತಾಧಿಕಾರಿಯಾಗಿ 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಿಸಿ ಆದೇಶಿಸಿದೆ. ಸದರಿ ಆಡಳಿತಾಧಿಕಾರಿಗಳ ಅವಧಿಯನ್ನು ಕಾಲಕಾಲಕ್ಕೆ ವಿಸ್ತರಿಸಿ ಆದೇಶಿಸಲಾಗಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ 08–04–2011ರ ಆದೇಶದಲ್ಲಿ ದೇಶೀಯ ವಿದ್ಯಾ ಶಾಲಾ ಸಮಿತಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಈ ಸಂಘದ ಆಡಳಿತಾಧಿಕಾರಿಗಳ ಅವಧಿಯನ್ನು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರ ಕಲಂ 27 (ಎ) ರನ್ವಯ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ದಿನಾಂಕ 05–01–2011 ರಿಂದ 30–04–2011ರವರೆಗೆ ವಿಸ್ತರಿಸಿ ಆದೇಶಿಸಿದೆ.

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ದಿನಾಂಕ 04–10–2011ರ ಪತ್ರದಲ್ಲಿ ಉಪ ನಿಬಂಧಕರು, ಶಿವಮೊಗ್ಗ ಜಿಲ್ಲೆ ಇವರು ಸದರಿ ಸಂಸ್ಥೆಯ ಸಂಘದ ಸದಸ್ಯರ ಪಟ್ಟಿಯ ಬಗ್ಗೆ ವಿವಿಧ ನ್ಯಾಯಾಲಯಗಳಲ್ಲಿ ದಾಖಲಾಗಿರುವುದು ಚುನಾವಣೆ ನಡೆಸಲು ತೊಡಕುಂಟಾಗಿರುತ್ತದೆಂದು ವರದಿಸಿ ಹಾಗೂ ದಿನಾಂಕ 08–04–2011 ರಿಂದ ಮುಂದಿನ 6 ತಿಂಗಳ ಅವಧಿಗೆ ಆಡಳಿತಾಧಿಕಾರಿ ಅವಧಿ ವಿಸ್ತರಿಸಲು ಪ್ರಸ್ತಾವನೆ ಸಲ್ಲಿಸುತ್ತಾ ದಿನಾಂಕ 08–04–2010ರ ಆದೇಶದಲ್ಲಿ 5–01–2011 ರಿಂದ 30–04–2011ರವರೆಗೆ ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸುವುದರಿಂದ ಮತ್ತೆ ದಿನಾಂಕ 01–05–2011 ರಿಂದ ಮುಂದಿನ 6 ತಿಂಗಳಿಗೆ ವಿಸ್ತರಿಸುವಂತೆ ಪ್ರಸ್ತಾವನೆ ಸಲ್ಲಿಸಿದ್ದು ಅದನ್ನು ಪರಿಗಣಿಸಿ ಶಿಫಾರಸ್ಸು ಮಾಡುವಂತೆ ಸಹಕಾರ ಸಂಘಗಳ ನಿಬಂಧಕರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿದ ಸರ್ಕಾರವು ಆಡಳಿತಾಧಿಕಾರಿಗಳ ಅವಧಿಯನ್ನು ವಿಸ್ತರಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಅದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಇ 123 ಸಸಂನೋ 2009, ಬೆಂಗಳೂರು, ದಿನಾಂಕ 03–02–2012**

ಮೇಲೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ದೇಶೀಯ ವಿದ್ಯಾ ಶಾಲಾ ಸಮಿತಿ ಶಿವಮೊಗ್ಗ ಜಿಲ್ಲೆ, ಶಿವಮೊಗ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27(ಎ)(5)ರನ್ವಯ, ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಆಡಳಿತಾಧಿಕಾರಿಯಾಗಿ ನೇಮಕವಾಗಿರುವ ಆಡಳಿತಾಧಿಕಾರಿ ಅವಧಿಯನ್ನು ಅಂತಿಮವಾಗಿ ದಿನಾಂಕ 01–05–2011 ರಿಂದ ಮುಂದಿನ ಆರು (06) ತಿಂಗಳ ಅವಧಿಗೆ ವಿಸ್ತರಿಸಿ ಆದೇಶಿಸಿದೆ.

ಆಡಳಿತಾಧಿಕಾರಿಗಳು ಸದರಿ ಅವಧಿಯಲ್ಲಿ ಚುನಾವಣೆ ಪ್ರಕ್ರಿಯೆ ಪೂರ್ಣಗೊಳಿಸಿ ಹೊಸ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎ. ಎಸ್. ವಿಶ್ವೇಶ್ವರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ–2
ಸಹಕಾರ ಇಲಾಖೆ

ಪಿ.ಆರ್. 583

## HORTICULTURE SECRETARIAT

**Sub :** **"**Scheme for Integrated Farming in Coconut for productivity/Improvement with Coconut Development Board Assistance (100% CDB)" Establishment of Neera demonstration unit at Horticulture Farm, Tumbe, Dakshina Kannada district-Revision of the project cost and release of funds-reg.-

**Read :**
1) G.O. No. ತೋಇ 74 ತೋಯೋಕಾ 2010, ದಿನಾಂಕ 12–05–2010
2) G.O. No. HCD 51 HPP 2010, dated 28-3-2011
3) G.O. No. HCD 71 HPP 2011, dated 31-3-2011
4) G.O. No. HCD 108 HPP 2011, dated 12-5-2011
5) Letter of Director of Horticulture No. ತೋಇ/ತೋಬೆ/ಸತೋಅ2/03/2011-12, dated 29-10-2011.
6) Note submitted by Joint Director of Horticulture (plantation crop & Plant protection) dated 09-11-2011.
7) CDB Letter No. 1345/2010, dated 24-12-2011.

**Preamble:**

Sanction had been accorded to the Director of Horticulture to implement a new component during 2010-11 namely, "Establishment of Neera demonstration unit at Horticulture Farm, Tumbe, Dakshina Kannada district" under the "Scheme for

Integrated Farming in Coconut for Productivity/Improvement in the State" under the Head of Account 2401-00-108-2-35-100 (Financial Assistance/Relief), as per Government Order read at (1) above. The total cost of the project was Rs. 77.35 lakhs out of which Rs. 15.04 lakhs had been Coconut Development Board's share and Rs. 62.31 lakhs has been the State share.

2. An amount of Rs. 62.00 lakhs has been released to the Director of Horticulture towards the state share for the above programme vide Government Order read at (2) above.

3. Sanction had been accorded to continue the said programme during 2011-12 as an ongoing component vide Government Order read at (3) above with an allocation of Rs. 42.50 lakhs of which Coconut Development Board share will be Rs. 7.50 lakhs and State share will be Rs. 35.00 lakhs.

4. An amount of Rs. 7.50 lakhs had been released to the Director of Horticulture towards the Coconut Development Board share for the programmed vide Government Order read at (4) above.

5. The Director of Horticulture has submitted a proposal to the Government requesting to enhance the over-all allocation for the programme from Rs. 77.40 lakhs to Rs. 115.00 lakhs and release fund for meeting the expenses towards the machinery for the project vide letter read at (5), Further, it is informed that the sharing pattern will be 25:75 between Government of India and Government of Karnataka and accordingly the amount will be Rs. 28.75 lakhs and Rs. 86.25 lakhs, respectively vide Note read at (6) above.

6. Coconut Development Board has approved the revised project as per its letter read at (7) above.

7. This has been examined and hence this Order:

**Government Order No. HCD 192 HPP 2011, Bangalore, dated 07-02-2012**

Government is pleased to revise the project cost for "Establishment of Neera demonstration unit at Horticulture Farm, Tumbe, Dakshina Kannada district" to Rs. 115.00 lakhs with a sharing pattern of 25:75 between Government of India and Government of Karnataka and accordingly the amount will be Rs. 28.75 lakhs and Rs. 86.25 lakhs, respectively.

2. **An amount of Rs. 24.25 Lakhs (Rupees Twenty Four lakhs and Twenty Five Thousand only)** is released under the "Scheme for Integrated Farming in Coconut for Productivity/Improvement in the State" under the Head of Account 2401-00-108-2-35-100 (Financial Assistance) during the year 2011-12 towards the State share.

3. This order is issued with the concurrence of Finance Department vide Note No. FD 534 exp-4/2011, dated 01-02-2012.

By Order and in the name of the Governor of Karnataka

**B. C. Prakash**

Under Secretary to Government

P.R. 584 Horticulture Department

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಉದಗಟ್ಟಿ ಹಡಗಿನಾಳ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದಿಸುವ ಬಗ್ಗೆ.–

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 236 ಮಸಾವಿ 2009(5) ದಿನಾಂಕ 24–12–2009
2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರ ಪತ್ರದ ಕ್ರಮಾಂಕ:ಮುಇಂ/ಸನೀ/(ಉ)ವಲಯ/ಬಿಜೆಪಿ/ಎಇ–1/2011–12/6018. ದಿನಾಂಕ 29–11–2011.

**ಪ್ರಸ್ತಾವನೆ :**

ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಉದಗಟ್ಟಿ ಹಡಗಿನಾಳ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿ ಅಂದಾಜಿಗೆ ಉಲ್ಲೇಖ (1)ರಲ್ಲಿ ನಮೂದಿಸಿರುವ ಸರ್ಕಾರದ ಆದೇಶದಲ್ಲಿ ಎ.ಐ.ಬಿ.ಪಿ. ಕಾರ್ಯಕ್ರಮದಡಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದ್ದು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ ಬಿಜಾಪುರರವರು ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ. ಈ ಕಾಮಗಾರಿಯನ್ನು ಎ.ಐ.ಬಿ.ಪಿ. ಕಾರ್ಯಕ್ರಮದಡಿ ಕೈಗೊಳ್ಳಲು ಭಾರತ ಸರ್ಕಾರದ ಅನುಮೋದನೆ ದೊರೆತಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾವಿ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ–ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಜಿಲ್ಲಾ ಟೆಂಡರ್ ಬುಲೆಟಿನ್ | 08–08–2011 |
| ರಾಜ್ಯ ಟೆಂಡರ್ ಬುಲೆಟಿನ್ | 06–08–2011 |
| ಸಂಯುಕ್ತ ಕರ್ನಾಟಕ ದಿನಪತ್ರಿಕೆ | 05–08–2011 |
| ಕನ್ನಡ ಪ್ರಭ ದಿನಪತ್ರಿಕೆ | 05–08–2011 |
| ಡೆಕ್ಕನ್ ಹೆರಾಲ್ಡ್ ಆಂಗ್ಲ ದಿನಪತ್ರಿಕೆ | 05–08–2011 |
| ಟೈಮ್ಸ್ ಆಫ್ ಇಂಡಿಯಾ ದಿನಪತ್ರಿಕೆ | 05–08–2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಈ ಪೈಕಿ ಒಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 08–11–2011 ರಂದು ತೆರೆದು ಪರಿಶೀಲಿಸಲಾಗಿದ್ದು ವಿವರಗಳು ಕೆಳಕಂಡಂತಿವೆ.

| | | | | |
|---|---|---|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 2,64,75,189/- |
| ಪ್ರಸಕ್ತ ಸಾಲಿನ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | | | | ರೂ. 3,18,97,287/- |
| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
| 1 | ಜಯಶೀಲ ನಾರಾಯಣ ಶೆಟ್ಟಿ<br>ಒಂದನೇ ದರ್ಜೆ ಗುತ್ತಿಗೆದಾರರು | 4,23,24,309/- | 59.86 ಹೆಚ್ಚು | 32.69 ಹೆಚ್ಚು |

ಮೇಲ್ಕಂಡಂತೆ ಶ್ರೀ ಜಯಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 32.69 ರಷ್ಟು ಹೆಚ್ಚಾಗಿದು, ಸದರಿಯವರ ಟೆಂಡರ್‌ನ್ನು ಸಂದಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಗುತ್ತಿಗೆದಾರರು ದಿನಾಂಕ 21-01-2012ರ ಪತ್ರದಲ್ಲಿ ಕಾಮಗಾರಿಯ ಸುತ್ತಮುತ್ತಲೂ ಇರುವ ಭಾರೀ ನೀರಾವರಿ ಯೋಜನೆ ನಾಲೆಗಳಿಗೆ ನಿರಂತರವಾಗಿ ನೀರು ಹರಿಸುವುದರಿಂದ, ಕಾಮಗಾರಿಯನ್ನು ರಿಂಗ್‌ಬಂಡ್ ನಿರ್ಮಿಸಿ ಮಾಡಬೇಕಾಗಿರುತ್ತದೆಂದು ತಿಳಿಸುತ್ತಾ ತಾವು ನಮೂದಿಸಿರುವ ದರಗಳನ್ನು ಕಡಿಮೆಗೊಳಿಸಿ ಪರಿಷ್ಕೃತ ಟೆಂಡರಿಗಿಟ್ಟ ಮೊತ್ತದ ಮೇಲೆ ಕನಿಷ್ಠ ಶೇ. 15.00 ರಷ್ಟು ಹೆಚ್ಚಿನ ದರದಲ್ಲಿ ಕಾಮಗಾರಿಯನ್ನು ನಿರ್ವಹಿಸಲು ಸಹಮತಿಸಿರುತ್ತಾರೆ.

ಈ ಟೆಂಡರನ್ನು ಸರ್ಕಾರದಲ್ಲಿ ಪರಿಶೀಲಿಸಿ ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 3,18,97,287/-ಗಳ ಮೇಲೆ ಶೇ. 14.90 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 3,66,49,983/- ಗಳಿಗೆ ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 80 ಅಪಿಬಂ 2011 (ತಾಂತ್ರಿಕ), ಬೆಂಗಳೂರು, ದಿನಾಂಕ 06-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಬೆಳಗಾವಿ ಜಿಲ್ಲೆ ಗೋಕಾಕ ತಾಲ್ಲೂಕಿನ ಉದಗಟ್ಟಿ ಹಡಗಿನಾಳ ಗ್ರಾಮದ ಹತ್ತಿರ ಘಟಪ್ರಭಾ ನದಿಗೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಡಲಾದ ಮೊತ್ತು ರೂ. 3,18,97,287/-ಗಳ ಮೇಲೆ ಶೇ. 14.90ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 3,66,49,983/-ಗಳಿಗೆ (ರೂ. ಮೂರು ಕೋಟಿ ಅರವತ್ತಾರು ಲಕ್ಷ ನಲವತ್ತೊಂಭತ್ತು ಸಾವಿರದ ಒಂಭೈನೂರ ಎಂಬತ್ಮೂರು ಮಾತ್ರ) ಗಳಿಗೆ ಶ್ರೀ ಜಯಶೀಲ ನಾರಾಯಣ ಶೆಟ್ಟಿ, ಒಂದನೇ ದರ್ಜೆ ಗುತ್ತಿಗೆದಾರರು ರವರಿಗೆ ಕಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಸಿ 2002, ದಿನಾಂಕ 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 585

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕು, ನಿಟ್ಟೂರುಕೆರೆ ಅಭಿವೃದ್ಧಿ ಕಾಮಗಾರಿಯ ಟೆಂಡರ್ ಅನುಮೋದನೆ ಕುರಿತು.-

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ: ಸನೀಇ 108 ಮಸಾವಿ 2010, ದಿನಾಂಕ 28-09-2011

2. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ/ತಾಂ.ಸ.7/ಸ.ಇಂ.15 ಮಂಡ್ಯ ಜಿ/ನಿಟ್ಟೂರು ಕೆರೆ/ಟೆಂಡರ್/2011-12/126, ದಿನಾಂಕ 09-01-2012.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 13ನೇ ಹಣಕಾಸು ಆಯೋಗದ ಅನುದಾನದಡಿ ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕು, ನಿಟ್ಟೂರು ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಕೈಗೊಳ್ಳಲು ಅನುಮೋದನೆ ನೀಡಲಾಗಿದ್ದು. ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ರೂ. 80.00 ಲಕ್ಷಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮೈಸೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೋಕ್ಯೂರ್‌ಮೆಂಟ್ ಮೂಲಕ ಕರೆಯಲಾದ, ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ಮಂಡ್ಯ ಜಿಲ್ಲಾ ಟೆಂಡರ್ ಬುಲೆಟಿನ್ | 08-11-2011 |
| ಪ್ರಜಾವಾಣಿ ದಿನಪತ್ರಿಕೆ | 11-11-2011 |
| ದಿ ಹಿಂದೂ | 11-11-2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಇಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರಲ್ಲಿ ಒಬ್ಬರು ಮಾತ್ರ ಅರ್ಹತೆ ಹೊಂದಿದ್ದು ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 21-12-2011 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 78,28,515/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 78,59,890/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು ಹೆಚ್ಚಳ/ಕಡಿಮೆ |
|---|---|---|---|---|
| 1 | ನಿರ್ಮಾಣ್ ಇಂಜಿನಿಯರ್ಸ್ ಮತ್ತು ಕಂಟ್ರಾಕ್ಟರ್, ಬೆಂಗಳೂರು | 82,86,197/- | 5.846 ಹೆಚ್ಚು | 5.4238 ಹೆಚ್ಚು |

ಮೇಲ್ಕಂಡಂತೆ ಮೇ॥ ನಿರ್ಮಾಣ್ ಇಂಜಿನಿಯರ್ಸ್ ಮತ್ತು ಕಂಟ್ರಾಕ್ಟರ್ಸ್, ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿರುವ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 5.4238 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 5.25% ಹೆಚ್ಚಿನ ದರಗಳಿಗೆ ಅಂದರೆ ರೂ. 82,72,534/- ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 03 ಕೆಜಿದು (ತಾಂತ್ರಿಕ) 2012, ಬೆಂಗಳೂರು, ದಿನಾಂಕ 03-02-2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆ, ಮಳವಳ್ಳಿ ತಾಲ್ಲೂಕು, ನಿಟ್ಟೂರು ಕೆರೆ ಅಭಿವೃದ್ಧಿ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 78,59,890/ಗಳ ಮೇಲೆ ಶೇ. 5.25 ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 82,72,534/-ಗಳಿಗೆ (ರೂ. ಎಂಬತ್ತೆರೆಡು ಲಕ್ಷ ಎಪ್ಪತ್ತೆರೆಡು ಸಾವಿರದ ಐದು ನೂರ ಮೂವತ್ತಾ ನಾಲ್ಕು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಮೇ. ನಿರ್ಮಾಣ್ ಇಂಜಿನಿಯರ್ಸ್ ಮತ್ತು ಕಂಟ್ರಾಕ್ಟರ್ಸ್ ರವರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ 20-01-2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ರುದ್ರಮೂರ್ತಿ**
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 586

## ಜಲಸಂಪನ್ಮೂಲ ಸಚಿವಾಲಯ

**ವಿಷಯ :** ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಬಜರೆ ಗ್ರಾಮದ ಹೊಸಪಟ್ನ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ಟೆಂಡರ್ ಅನುಮೋದನೆ ಬಗ್ಗೆ.

**ಓದಲಾಗಿದೆ:** 1) ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರುರವರ ಪತ್ರದ ಸಂಖ್ಯೆ: ಮುಸದ / ತಾಂಸ-5-ಸ.ಇಂ.-11 / ದ.ಕ.ಜಿ / ಬೆ.ತಾ / ಹೊಸಪಟ್ಟಣ / ಇ-ಪ್ರೊಕ್ಯೂರ್‌ಮೆಂಟ್/ಟೆಂಡರ್ ಅನುಮೋದನೆ/2011/276, ದಿನಾಂಕ 19.01.2012.

**ಪ್ರಸ್ತಾವನೆ :**

ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಬಜರೆ ಗ್ರಾಮದ ಹೊಸಪಟ್ನ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯ ರೂ. 60.00 ಲಕ್ಷಗಳ ಅಂದಾಜು ಪಟ್ಟಿಗೆ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ ಬೆಂಗಳೂರು ಇವರು ಆಡಳಿತಾತ್ಮಕ ಅನುಮೋದನೆ ಹಾಗೂ ತಾಂತ್ರಿಕ ಮಂಜೂರಾತಿ ನೀಡಿರುತ್ತಾರೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಮಂಗಳೂರು ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ಇ-ಪ್ರೊಕ್ಯೂರ್‌ಮೆಂಟ್ ಮೂಲಕ ಕರೆಯಲಾದ, ಟೆಂಡರ್‌ನ ಪ್ರಕಟಣೆಯನ್ನು ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | |
|---|---|
| ದಕ್ಷಿಣ ಕನ್ನಡ ಜಿಲ್ಲಾ ಟೆಂಡರ್ ಬುಲೆಟಿನ್ | 08.11.2011 |
| ಟೈಮ್ಸ್ ಆಫ್ ಇಂಡಿಯಾ ದಿನ ಪತ್ರಿಕೆ | 27.11.2011 |
| ಉದಯವಾಣಿ | 27.11.2011 |

ಈ ಟೆಂಡರ್ ಪ್ರಕಟಣೆಗೆ ಸ್ಪಂದಿಸಿ ಒಬ್ಬರು ಗುತ್ತಿಗೆದಾರರು ಭಾಗವಹಿಸಿದ್ದು ಇವರ ಟೆಂಡರ್ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್ ಅನ್ನು ದಿನಾಂಕ 04.01.2012 ರಂದು ತೆರೆಯಲಾಗಿದ್ದು ವಿವರಗಳು ಕೆಳಕಂಡಂತಿವೆ.

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 58,30,624/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳಿಗೆ ಪರಿಷ್ಕರಿಸಿದಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 58,55,525/- |

| ಕ್ರಮ ಸಂಖ್ಯೆ | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು | ಮಂಜೂರಾದ ಅಂದಾಜಿನ ದರಗಳ ಮೇಲಿನ | ಪರಿಷ್ಕರಿಸಿದ ದರಗಳ ಮೇಲಿನ ಶೇಕಡಾವಾರು |
|---|---|---|---|---|

| | | ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಶೇಕಡಾವಾರು ಹೆಚ್ಚಳ/ಕಡಿಮೆ | ಹೆಚ್ಚಳ/ಕಡಿಮೆ |
|---|---|---|---|---|
| 1 | ಸಿ.ಎಂ. ಅಹ್ಮದ್, 1ನೇ ದರ್ಜೆ ಗುತ್ತಿಗೆದಾರರು | 66,98,078/– | 14.8775 ಹೆಚ್ಚು | 14,389 ಹೆಚ್ಚು |

ಮೇಲ್ಕಂಡಂತೆ ಶ್ರೀ ಸಿ.ಎಂ. ಅಹ್ಮದ್, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ಅರ್ಹತೆ ಹೊಂದಿದ ಗುತ್ತಿಗೆದಾರರಾಗಿದ್ದು ಇವರು ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 14,389 ರಷ್ಟು ಹೆಚ್ಚಾಗಿರುತ್ತದೆ. ಸದರಿ ಟೆಂಡರನ್ನು ಪರಿಶೀಲಿಸಿ ಪರಿಷ್ಕೃತ ದರಗಳ ಮೇಲೆ ಶೇ. 14.25% ಹೆಚ್ಚಿನ ದರಗಳಿಗೆ ಅಂದರೆ ರೂ. 66,89,937/– ಗಳಿಗೆ ಟೆಂಡರನ್ನು ಅನುಮೋದಿಸಲು ಪರಿಗಣಿಸಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 14 ಅಪಿಬಂ 2012 (ತಾಂತ್ರಿಕ), ಬೆಂಗಳೂರು, ದಿನಾಂಕ: 03ನೇ ಫೆಬ್ರವರಿ 2012**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆ, ಬೆಳ್ತಂಗಡಿ ತಾಲ್ಲೂಕು, ಬಜರೆ ಗ್ರಾಮದ ಹೊಸಪಟ್ನ ಎಂಬಲ್ಲಿ ಕಿಂಡಿ ಅಣೆಕಟ್ಟು ನಿರ್ಮಾಣ ಕಾಮಗಾರಿಯನ್ನು ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿ ಪರಿಷ್ಕರಿಸಿದಂತೆ ಟೆಂಡರಿಗಿಟ್ಟ ಪರಿಷ್ಕೃತ ಮೊತ್ತ ರೂ. 58,55,525/–ಗಳ ಮೇಲೆ ಶೇ. 14.25ರಷ್ಟು ಹೆಚ್ಚಿನ ದರದಲ್ಲಿ ಅಂದರೆ ರೂ. 66,89,937/–ಗಳಿಗೆ (ರೂ. ಅರವತ್ತಾರು ಲಕ್ಷ ಎಂಬತ್ತೊಂಬತ್ತು ಸಾವಿರದ ಒಂಬೈನೂರ ಮೂವತ್ತೇಳು ರೂಪಾಯಿಗಳು ಮಾತ್ರ) ಕಾಮಗಾರಿಯನ್ನು ಶ್ರೀ ಸಿ.ಎಂ. ಅಹ್ಮದ್, 1ನೇ ದರ್ಜೆ ಗುತ್ತಿಗೆದಾರರಿಗೆ ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002, ದಿನಾಂಕ: 20/01/2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರುದ್ರಮೂರ್ತಿ**
ಪಿ.ಆರ್. 587
ಪದನಿಮಿತ್ತ ಸರ್ಕಾರದ ಅಧೀನ ಕಾರ್ಯದರ್ಶಿ
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

## HOME SECRETARIAT

**Sub :** Conducting In-House enquiry into the allegations against the police for excess use of force, use of obscene language, alleged setting fire to the vehicles parked in the Court Complex against the members of the legal profession – reg.

**Preamble:**

On 2nd March, 2012 in the conflict between the members of the media and the advocates extensive violence erupted and lathi charge was resorted to in which a number of lawyers, some members of the media were injured and number of vehicles were also damaged due to arson. Allegations were made that the police themselves set fire to the vehicles and indiscriminately resorted to lathi charge at K.R. circle, Mysore Bank Circle and in the Court Complex without the orders of the Presiding Officer of the Court. It was also alleged that the police manning the wireless units used filthy language against senior police officers openly which was audible to the public. The Bar Association has demanded serious enquiry into these allegations against the police men.

2. In the reconciliation meeting chaired by the Hon'ble Chief Minister on 6th March 2012, at 6.00 p.m with the advocates and members of the media, replying to the demands of serious action against the police the CM has stated that no action against any officer can be taken without ascertaining the facts. He has also assured that an in-House enquiry will be conducted by the Government expeditiously to find out the facts by appointing a senior police officer in the department. In the circumstances the following order.

**Government Order No. HD 120 PoSiPa 2012, Bangalore, Dated: 7th March 2012.**

In the circumstances explained above the Government hereby appoints Shri Roopak Kumar Dutta, DGP (CID) as the Enquiry Officer to look into the allegations of excess use of force by the police men during the lathi charge beating of advocates in Bangalore City Civil Court Complex, Mysore Bank Circle and K.R. Circle use of obscene language in the wireless by the policemen, allegation against the police for setting fire to the vehicles parked in the City Civil Court Complex and submit the fact finding report to the Government within 4 weeks.

By Order and in the name of the Governor of Karnataka,
**S.M. JAAMDAR**
PR.830
Principal Secretary to Government,
Home Department